ಈ ಮೂಲಕ ಸಾರ್ವಜನಿಕರ ಅವಗಾಹನೆಗೆ ತಿಳಿಯಪಡಿಸುವುದೇನೆಂದರೆ ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ತುಮಕೂರು ಕಛೇರಿಯ ಹಳೆಯ ಅಂಬಾಸಿಡರ್ ಕಾರ್ ಸಂಖ್ಯೆ: ಸಿಎಜಿ 9180ನ್ನು ದಿನಾಂಕ: 17.03.2005 ರಂದು ಬೆಳಿಗ್ಗೆ 11.00 ಗಂಟೆಗೆ ಜಿಲ್ಲಾ ಕೈಗಾರಿಕಾ ಕೇಂದ್ರ ಕಛೇರಿ ಆವರಣದಲ್ಲಿ ಬಹಿರಂಗ ಹರಾಜು ಮೂಲಕ ವಿಲೇ ಮಾಡಲಾಗುವುದು. ಸದರಿ ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವವರು ಕಛೇರಿಯ ವೇಳೆಯಲ್ಲಿ ಮೇಲ್ಕಂಡ ಕಾರನ್ನು ಪರಿಶೀಲಿಸಬಹುದಾಗಿರುತ್ತದೆ.

**ಹರಾಜು ನಿಬಂಧನೆಗಳು:**

1. ಹರಾಜಿನಲ್ಲಿ ಭಾಗವಹಿಸುವ ಬಿಡ್ಡುದಾರರು ದಿನಾಂಕ: 17.03.2005ರ ಬೆಳಿಗ್ಗೆ 10.00 ಗಂಟೆಯೊಳಗಾಗಿ ಮುಂಗಡ ಠೇವಣಿ ರೂ.5,000-00 (ಐದು ಸಾವಿರ ಮಾತ್ರ) ಗಳನ್ನು ಕಛೇರಿಯಲ್ಲಿ ಪಾವತಿಸಿ ರಸೀತಿ ಪಡೆಯುವುದು.
2. ಸದರಿ ಹರಾಜನ್ನು ಅಂಗೀಕರಿಸುವ ಅಥವಾ ಯಾವುದೇ ಕಾರಣ ನೀಡದೆ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಿದೆ.
3. ಅಂತಿಮ ಬಿಡ್ಡುದಾರರು ಹರಾಜು ಮೊತ್ತದ ಶೇ.25 ರಷ್ಟು ಹಣವನ್ನು ಹರಾಜಿನ ದಿನವೇ ಪಾವತಿಸಿ ರಸೀತಿ ಪಡೆಯುವುದು.
4. ಹರಾಜು ಸ್ವೀಕರಿಸಿದ ಅನುಮತಿ ದೊರೆತ ತಕ್ಷಣ ಯಶಸ್ವಿ ಹರಾಜುದಾರರಿಗೆ ಲಿಖಿತ ಮೂಲಕ ಮಾಹಿತಿ ನೀಡಲಾಗುವುದು ಹಾಗೂ ಈ ಮಾಹಿತಿ ದೊರೆತ 15 ದಿನಗಳೊಳಗಾಗಿ ಬಾಕಿ ಹಣವನ್ನು ಒಂದೇ ಕಂತಿನಲ್ಲಿ ಪೂರ್ಣವಾಗಿ ಪಾವತಿಸಿ ವಾಹನವನ್ನು ಸುಬರ್ದಿಗೆ ಪಡೆಯುವುದು ತಪ್ಪಿದಲ್ಲಿ ವಿಳಂಬಕ್ಕೆ ಪ್ರತಿಯೊಂದು ದಿನಕ್ಕೆ ರೂ.100.00 ರಂತೆ ನೆಲಬಾಡಿಗೆಯನ್ನು ವಿಧಿಸಲಾಗುವುದು ಹಾಗೂ ನಿಗದಿತ ಅವಧಿಯಲ್ಲಿ ವಾಹನವನ್ನು ತೆಗೆದುಕೊಂಡು ಹೋಗಲು ವಿಫಲರಾದಲ್ಲಿ ಸದರಿ ಹರಾಜನ್ನು ರದ್ದುಗೊಳಿಸಿ ಮರು ಹರಾಜು ನಡೆಸಲಾಗುವುದು ಹಾಗೂ ಎರಡನೇ ಹರಾಜಿನಲ್ಲಿ ಮೊದಲಿನ ಹರಾಜಿಗಿಂತ ಕಡಿಮೆ ಹರಾಜಿಗೆ ಹರಾಜು ನಿಂತಲ್ಲಿ ನಷ್ಟದ ಹಣವನ್ನು ಕಂದಾಯ ಬಾಕಿಯಂತೆ ನಿಮ್ಮಿಂದ ವಸೂಲಿ ಮಾಡಲಾಗುವುದು ಎಂದು ತಿಳಿಯುವುದು.
5. ಅಂತಿಮ ಹರಾಜುದಾರರು ಹರಾಜು ಸ್ವೀಕರಿಸಿದ ನಂತರ ವಾಹನ ನೋಂದಣಿಯ ನಿಗದಿತ ನಮೂನೆಯನ್ನು ಖುದ್ದಾಗಿ ತಂದು ನೋಂದಣಿ ಖರ್ಚು ವೆಚ್ಚಗಳನ್ನು ಹಾಗೂ ವಾಹನವನ್ನು ಸಾಗಿಸಿಕೊಂಡು ಹೋಗುವ ವೆಚ್ಚವನ್ನು ಸ್ವಂತವಾಗಿ ಭರಿಸತಕ್ಕದ್ದು.
6. ಅಂತಿಮ ಬಿಡ್ಡುದಾರರು ವಾಹನದ ಮೇಲಿರುವ ತೆರಿಗೆ ವಾಹನ ಮಾರಾಟ ತೆರಿಗೆ ಮತ್ತು ಇತರೆ ವೆಚ್ಚಗಳನ್ನು ಪೂರ್ತಿಯಾಗಿ ಪಾವತಿಸಿದ ನಂತರವೇ ವಾಹನವನ್ನು ಸುಬರ್ದಿಗೆ ನೀಡಲಾಗುವುದು.
7. ಬಿಡ್ಡಿನ ಏರಿಕೆಯ ಮೊತ್ತ 1000-00 ಗಳಾಗಿರುತ್ತದೆ.
8. ಹೆಚ್ಚಿನ ವಿವರಗಳನ್ನು ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ತುಮಕೂರು ಇವರ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಪಿ.ಆರ್. 54 ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ತುಮಕೂರು.

**ಸಣ್ಣ ನೀರಾವರಿ ವಿಭಾಗ, ತುಮಕೂರು**

**ಎಕ್ಸಿಕ್ಯೂಟಿವ್ ಇಂಜಿನಿಯರ್‌ರವರ ಕಛೇರಿ, ಸಣ್ಣ ನೀರಾವರಿ ವಿಭಾಗ, ತುಮಕೂರು**

**ಟೆಂಡರ್ ಪ್ರಕಟಣೆ (ಎರಡು ಲಕೋಟೆ ಬಿಡ್ ಪದ್ಧತಿಯಲ್ಲಿ)**

**ಸಂಖ್ಯೆ: ಇಇ/ಸನೀವಿ/ತು/ಸ.ಅ-1/2004-05, ದಿನಾಂಕ: 17ನೇ ಜನವರಿ 2005**

ಕರ್ನಾಟಕ ರಾಜ್ಯದ ರಾಜ್ಯಪಾಲರ ಪರವಾಗಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳ ಪಾರದರ್ಶಕತೆ ಅಧಿನಿಯಮ 2000 ರನ್ವಯ ಈ ಕೆಳಗಿನ ಷೆಡ್ಯೂಲ್‌ನಲ್ಲಿ ನಮೂದಾಗಿರುವ ಕಾಮಗಾರಿಗೆ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿಸಿರುವ ಒಂದನೇ ದರ್ಜೆಯ ಅರ್ಹ ಗುತ್ತಿಗೆದಾರರಿಂದ ಎರಡು ಲಕೋಟೆ ಬಿಡ್ ಪದ್ಧತಿಯಲ್ಲಿ ನಿಗದಿತ ನಮೂನೆಯಲ್ಲಿ ಐಟಂವಾರು ಟೆಂಡರನ್ನು ದ್ವಿಪ್ರತಿಗಳಲ್ಲಿ ಆಹ್ವಾನಿಸಲಾಗಿದೆ. ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್‌ಗಳನ್ನು ಪ್ರತ್ಯೇಕ ಲಕೋಟೆಗಳಲ್ಲಿ ಮೊಹರು ಮಾಡಿ ನಂತರ ಎರಡನ್ನು ಒಟ್ಟಿಗೆ ಒಂದೇ ಲಕೋಟೆಯಲ್ಲಿ ಮೊಹರು ಮಾಡಿ, ಲಕೋಟೆಗಳ ಮೇಲೆ ಕೆಲಸದ ಹೆಸರನ್ನು ಬರೆದು ಗುತ್ತಿಗೆದಾರರ ಪೂರ್ಣ ವಿಳಾಸದೊಂದಿಗೆ ಸಲ್ಲಿಸತಕ್ಕದ್ದು. ಎಕ್ಸಿಕ್ಯೂಟಿವ್ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ತುಮಕೂರು ಕಛೇರಿಯಲ್ಲಿ ಪೂರ್ಣಗೊಂಡ ಟೆಂಡರುಗಳನ್ನು ದಿನಾಂಕ: 10.3.2005 ರಂದು ಸಂಜೆ 4.00 ಗಂಟೆಯವರೆಗೆ ಸ್ವೀಕರಿಸಲಾಗುವುದು. ಖಾಲಿ ಟೆಂಡರು ಫಾರಂ ಪಡೆಯಲು ಸಲ್ಲಿಸಿದ ಮನವಿ ಪತ್ರವನ್ನು ಪರಿಶೀಲಿಸಿದ ನಂತರ ನಿಗದಿತ ಟೆಂಡರ್ ಫಾರಂ ಬೆಲೆಯನ್ನು ಪಡೆದು ಮುಂದೆ ತಿಳಿಸಿರುವ ದಿನಾಂಕದೊಳಗೆ ಕಛೇರಿ ವೇಳೆಯಲ್ಲಿ ಮನವಿಯನ್ನು ಸ್ವೀಕರಿಸಲಾಗುವುದು. ಹೆಚ್ಚಿನ ವಿವರಗಳಿಗೆ ಈ ಕೆಳಗೆ ಸಹಿ ಮಾಡಿರುವವರ ಕಛೇರಿಯಿಂದ ಕಛೇರಿಯ ವೇಳೆಯಲ್ಲಿ ಪಡೆಯಬಹುದೆಂದು ತಿಳಿಸಲಾಗಿದೆ.

1) ಖಾಲಿ ಟೆಂಡರು ಷೆಡ್ಯೂಲಿಗಾಗಿ ಮನವಿ ಸಲ್ಲಿಸಲು ಕಡೆಯ ದಿನಾಂಕ: 25.2.2005ರ ಸಂಜೆ 5.30 ರೊಳಗೆ
2) ಅರ್ಹ ಗುತ್ತಿಗೆದಾರರಿಗೆ ಖಾಲಿ ಟೆಂಡರು ಷೆಡ್ಯೂಲನ್ನು ಒದಗಿಸುವ ದಿನಾಂಕ: 5.3.2005ರ ಸಂಜೆ 5.30 ರೊಳಗೆ
3) ಪೂರ್ಣಗೊಂಡ ಟೆಂಡರನ್ನು ಸ್ವೀಕರಿಸುವ ದಿನಾಂಕ: 10.3.2005 ರಂದು ಸಂಜೆ 4.00 ಗಂಟೆಯೊಳಗೆ
(ತಾಂತ್ರಿಕ ಬಿಡ್ಡು ಮತ್ತು ಆರ್ಥಿಕ ಬಿಡ್ಡುಗಳನ್ನೊಳಗೊಂಡಂತೆ)

ಸಾಧ್ಯವಾದಲ್ಲಿ ದಿನಾಂಕ: 10.3.2005 ರಂದೇ ಸಂಜೆ 4.30ರ ನಂತರ ಗುತ್ತಿಗೆದಾರರಿಂದ ಪಡೆದ ತಾಂತ್ರಿಕ ಬಿಡ್ಡಿನ ಲಕೋಟೆಗಳನ್ನು ತೆರೆಯಲಾಗುವುದು.

ಮೇಲೆ ತಿಳಿಸಿರುವ ದಿನಾಂಕಗಳನ್ನು ಸಾರ್ವಜನಿಕ ರಜೆ ಎಂದು ಘೋಷಿಸಲ್ಪಟ್ಟಲ್ಲಿ ಆ ದಿನಗಳ ಮುಂದಿನ ದಿನಗಳಲ್ಲಿ ಆಯಾ ಕಾರ್ಯಕ್ರಮವನ್ನು ನಡೆಸಲಾಗುವುದು.

**ಷೆಡ್ಯೂಲು**

| ಕೆಲಸದ ಹೆಸರು | ಟೆಂಡರಿಗಿಟ್ಟ ಕಾಮಗಾರಿಯ ಮೊತ್ತ ಲಕ್ಷ ರೂ.ಗಳಲ್ಲಿ | ಇ.ಎಂ.ಡಿ. ರೂ.ಗಳಲ್ಲಿ | ಖಾಲಿ ಟೆಂಡರು ಡಾಕ್ಯೂಮೆಂಟಿನ ಬೆಲೆ ಹಿಂದಿರುಗಿಸಲಾಗುವುದಿಲ್ಲ ರೂ.ಗಳಲ್ಲಿ | ಗುತ್ತಿಗೆದಾರರ ದರ್ಜೆ | ಕಾಮಗಾರಿ ಪೂರ್ಣಗೊಳಿಸಲು ನಿಗದಿಪಡಿಸಿರುವ ಕಾಲಾವಧಿ |
|---|---|---|---|---|---|
| ತುಮಕೂರು ಜಿಲ್ಲೆ ಕುಣಿಗಲ್ ತಾ: ದೀಪಾಂಬುಧಿ ಕೆರೆಯ ಕೋಡಿಯ ಪುನರ್ ನಿರ್ಮಾಣ | 71.00 | 71,000-00 | 5,000 + ತೆರಿಗೆ | 1ನೇ ದರ್ಜೆ ಗುತ್ತಿಗೆದಾರರು | 8 ತಿಂಗಳು ಮಳೆಗಾಲ ಬಿಟ್ಟು |

ನಿಬಂಧನೆಗಳು:

1) ಗುತ್ತಿಗೆದಾರರು ಖಾಲಿ ಟೆಂಡರು ಡಾಕ್ಯುಮೆಂಟಿಗೆ ಅರ್ಜಿ ಸಲ್ಲಿಸುವ ವೇಳೆ ಸಂಬಂಧಪಟ್ಟ ಅಧಿಕಾರಿಗಳಿಂದ ನೋಂದಣಿ ಪಡೆದಿರುವ ಮೂಲ ಪ್ರತಿಯನ್ನು ತೋರಿಸುವುದು ಹಾಗೂ ಕ್ರೋಢೀಕರಿಸಿದ ಒಂದು ಪ್ರತಿಯನ್ನು ಅರ್ಜಿ ಜೊತೆ ಲಗತ್ತಿಸುವುದು.

2) ಗುತ್ತಿಗೆದಾರರು ರಾಜ್ಯ ಮಾರಾಟ ತೆರಿಗೆಯಲ್ಲಿ ನೋಂದಣಿ ಮಾಡಿಸಿರುವ ಬಗ್ಗೆ ನೋಂದಣಿ ಪತ್ರದ ಪ್ರತಿ ಹಾಗೂ ತೀರುವಳಿ ಪತ್ರದ ಪ್ರತಿ, ಆದಾಯ ತೆರಿಗೆ ತೀರುವಳಿ ಪತ್ರದ ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.

3) ಇಡಿಗಂಟನ್ನು ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ತುಮಕೂರು ಇವರ ಹೆಸರಿಗೆ ಪಡೆದ ಡಿಮ್ಯಾಂಡ್ ಡ್ರಾಫ್ಟ್ / ನಿಶ್ಚಿತ ಠೇವಣಿ ರಶೀತಿ / ಪೇ ಆರ್ಡರ್ / ಪ್ಲೆಡ್ಜ್ ಮಾಡಿಸಿರುವ ರಾಷ್ಟ್ರೀಯ ಉಳಿತಾಯ ಪತ್ರಗಳನ್ನು ಒದಗಿಸುವುದು. ಇದಕ್ಕೆ ತಪ್ಪಿದವರ ಟೆಂಡರನ್ನು ತಿರಸ್ಕರಿಸಲಾಗುವುದು.

4) ಮೇಲಿನ ಕಾಮಗಾರಿಯನ್ನು ನಿರ್ವಹಿಸಲು ಈ ಹಿಂದಿನ 5 ವರ್ಷಗಳ ಅವಧಿಯಲ್ಲಿ ಮೇಲೆ ಟೆಂಡರ್ ಕರೆಯಲಾಗಿರುವ ಕಾಮಗಾರಿಯ ಟೆಂಡರಿಗಿಟ್ಟಿರುವ ಒಟ್ಟು ಮೊತ್ತದ ಶೇಕಡ 30 ರಷ್ಟಕ್ಕಿಂತ ಹೆಚ್ಚಾಗಿರುವ ಮೊತ್ತದ ಕಾಮಗಾರಿಯನ್ನು ನಿರ್ವಹಿಸಿ ಪೂರ್ಣಗೊಳಿಸಿರುವ ಗುತ್ತಿಗೆದಾರರು ಮಾತ್ರ ಪ್ರಸ್ತುತ ಪ್ರಕಟಣೆ ಹೊರಡಿಸಲಾಗಿರುವ ಕಾಮಗಾರಿಯ ಟೆಂಡರಿನಲ್ಲಿ ಭಾಗವಹಿಸಲು ಅರ್ಹರಿರುತ್ತಾರೆ. ಈ ರೀತಿ ಹಿಂದಿನ ಕಾಮಗಾರಿ ನಿರ್ವಹಿಸಿ ಪೂರ್ಣಗೊಳಿಸಿರುವ ಬಗ್ಗೆ ಸಂಬಂಧಪಟ್ಟ ಎಕ್ಸಿಕ್ಯೂಟಿವ್ ಇಂಜಿನಿಯರ್ ರವರಿಂದ ಪಡೆದಿರುವ ದೃಢೀಕರಣ ಪತ್ರದ ಪ್ರತಿಗಳನ್ನು ತಾಂತ್ರಿಕ ಬಿಡ್ಡಿನ ಲಕೋಟೆಯೊಳಗೆ ಒದಗಿಸತಕ್ಕದ್ದು.

5) ಅರ್ಹ ಗುತ್ತಿಗೆದಾರರು ಖಾಲಿ ಟೆಂಡರು ಡಾಕ್ಯುಮೆಂಟನ್ನು ಪಡೆದುಕೊಳ್ಳುವಾಗ ಗುತ್ತಿಗೆದಾರರು ನೋಂದಣಿಯ ಮೂಲ ಪಾಸು ಪುಸ್ತಕವನ್ನು ನೀಡಿ ಅದರಲ್ಲಿ ಖಾಲಿ ಟೆಂಡರು ಡಾಕ್ಯುಮೆಂಟನ್ನು ಪಡೆದುದಕ್ಕೆ ಈ ಕಛೇರಿಯಿಂದ ಹಿಂಬರಹ ಪಡೆದುಕೊಳ್ಳತಕ್ಕದ್ದು.

6) ಪೂರ್ವಭಾವಿಯಾಗಿ ಬೇಕಾಗಿರುವ ಅರ್ಹತೆಗಳ ಬಗ್ಗೆ ತಾಂತ್ರಿಕ ಬಿಡ್ಡು ಲಕೋಟೆಯಲ್ಲಿ ಒದಗಿಸಬೇಕಾದ ವಿವರಗಳು ಮತ್ತು ದೃಢೀಕರಣಗಳ ಪ್ರತಿಗಳು.

   ಅ) ಸಾಮಾನ್ಯ ಮಾಹಿತಿ.

   ಆ) ಸಾಮಾನ್ಯ ಅನುಭವವುಳ್ಳ ದಾಖಲೆಗಳು.

   ಇ) ಯಥಾ ರೀತಿಯ ಕಾಮಗಾರಿಗಳನ್ನು ನಿರ್ವಹಿಸಿ ಅನುಭವವುಳ್ಳ ಬಗ್ಗೆ ವಿವರವಾದ ದಾಖಲೆಗಳು.

   ಈ) ನಿರ್ದಿಷ್ಟಪಡಿಸಿರುವ ಕಾಮಗಾರಿ ನಿರ್ವಹಿಸಿರುವ ಬಗ್ಗೆ ದಾಖಲಾತಿ.

   ಉ) ಪ್ರಸ್ತುತ ಹಾಲಿ ಹೊಂದಿರುವ ಕಾಮಗಾರಿಗಳ ವಿವರ.

   ಊ) ಗುತ್ತಿಗೆದಾರರು ಹೊಂದಿರುವ ಯಂತ್ರೋಪಕರಣಗಳು.

ಸೂಚನೆ:

1. ಯಂತ್ರೋಪಕರಣಗಳನ್ನು ಸ್ವಂತವಾಗಿ ಪಡೆದಿರುವ ಬಗ್ಗೆ ದಾಖಲೆಗಳ ಪ್ರತಿಗಳು ಮತ್ತು ಬಾಡಿಗೆಗೆ ಪಡೆಯಬೇಕಾಗಿರುವ ಯಂತ್ರೋಪಕರಣಗಳಿಗೆ ಮಾಲೀಕರಿಂದ ಬಾಡಿಗೆ ದೃಢೀಕರಣ ಪತ್ರಗಳನ್ನು ತಾಂತ್ರಿಕ ಬಿಡ್ಡಿನ ಲಕೋಟೆಯಲ್ಲಿ ಒದಗಿಸತಕ್ಕದ್ದು.

2. ಈ ಮೇಲಿನ ಎಲ್ಲಾ ತಾಂತ್ರಿಕ ಬಿಡ್ಡಿನಲ್ಲಿ ಒದಗಿಸಿರುವ ಸಾಕ್ಷ್ಯಾಧಾರಗಳ ಡಾಕ್ಯುಮೆಂಟಿನ ಪ್ರತಿಗಳನ್ನು ಕರ್ನಾಟಕ ಸರ್ಕಾರದ ನೋಟರಿಯವರಿಂದಾಗಲೀ ಎಕ್ಸಿಕ್ಯೂಟಿವ್ ಇಂಜಿನಿಯರ್ ರವರಿಂದ ಅಥವಾ ಮೇಲ್ಪಟ್ಟ ಸರ್ಕಾರದ ಗೆಜೆಟೆಡ್ ಅಧಿಕಾರಿಗಳಿಂದ ದೃಢೀಕರಿಸಿ ತಾಂತ್ರಿಕ ಬಿಡ್ಡಿನ ಲಕೋಟೆಯೊಳಗೆ ಒದಗಿಸತಕ್ಕದ್ದು. ಹಾಗೂ ತಾಂತ್ರಿಕ ಬಿಡ್ಡಿನ ಲಕೋಟೆ ತೆರೆಯುವಾಗ ತಾಂತ್ರಿಕ ಬಿಡ್ಡಿನ ಪರಿಶೀಲನೆ ಪ್ರಕ್ರಿಯೆ ನಡೆಸುವುದಕ್ಕೆ ಸಾಕ್ಷ್ಯಾಧಾರಗಳ ದಾಖಲಾತಿಗಳ ಮೂಲ ಪ್ರತಿಗಳನ್ನು ಒದಗಿಸತಕ್ಕದ್ದು.

7) ಈ ಕಛೇರಿಯಿಂದ ಒದಗಿಸಲಾಗಿರುವ ಖಾಲಿ ಟೆಂಡರು ಷೆಡ್ಯೂಲ್‌ನ ಷೆಡ್ಯೂಲ್-ಬಿ ನಲ್ಲಿ ಗುತ್ತಿಗೆದಾರರು ದರ ಮತ್ತು ಕೆಲಸದ ಮೊತ್ತ ನಮೂದಿಸಿ ಆರ್ಥಿಕ ಬಿಡ್ಡಿನ ಲಕೋಟೆಯೊಳಗೆ ಸಲ್ಲಿಸತಕ್ಕದ್ದು.

8) ತಾಂತ್ರಿಕವಾಗಿ ಅರ್ಹರಾದ ಟೆಂಡರುದಾರರ ಆರ್ಥಿಕ ಬಿಡ್ಡನ್ನು ಸಮರ್ಥ ಅಧಿಕಾರಿಯವರಿಂದ ತಾಂತ್ರಿಕ ಬಿಡ್‌ಗೆ ಅಂಗೀಕಾರ ಪಡೆದ ನಂತರ ಸೂಕ್ತ ದಿನಾಂಕದಂದು ತೆರೆಯಲಾಗುವುದು. ಈ ಬಗ್ಗೆ ತಾಂತ್ರಿಕವಾಗಿ ಅರ್ಹತೆ ಹೊಂದಿದ ಟೆಂಡರುದಾರರುಗಳಿಗೆ ತಿಳಿಸಲಾಗುವುದು.

9) ಯಾವುದೇ ಟೆಂಡರನ್ನು ಒಪ್ಪುವ ಮತ್ತು ತಿರಸ್ಕರಿಸುವ ಹಕ್ಕನ್ನು ಕಾದಿರಿಸಲಾಗಿದೆ.

ರಾಮಣ್ಣ

ಪಿ.ಆರ್. 55    ಎಕ್ಸಿಕ್ಯೂಟಿವ್ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ತುಮಕೂರು.

**ನಮೂನೆ - 1**

**(9ನೇ ನಿಯಮ ನೋಡಿ)**

**ಜಲ ಸಂಪನ್ಮೂಲ ಇಲಾಖೆ**

**ಅಧೀಕ್ಷಕ ಅಭಿಯಂತರವರ ಕಛೇರಿ, ಕರ್ನಾಟಕ ನೀರಾವರಿ ನಿಗಮ ನಿಯಮಿತ,**

**ಘಟಪ್ರಭಾ ಬಲದಂಡೆ ಕಾಲುವೆ ನಿರ್ಮಾಣ ವೃತ್ತ, ಹಿಡಕಲ್ ಡ್ಯಾಮ್**

**ಅಧಿಸೂಚನೆ**

ಜಲಸಂಪನ್ಮೂಲ ಇಲಾಖೆಯ, ಘಟಪ್ರಭಾ ಬಲದಂಡೆ ಕಾಲುವೆ ನಿರ್ಮಾಣ ವಿಭಾಗ, ನಂ.4, ಚಿಕ್ಕೋಡಿ ಇಲ್ಲಿ ದ್ವಿತೀಯ ದರ್ಜೆ ಸಹಾಯಕ ಆಗಿ ಕೆಲಸ ನಿರ್ವಹಿಸುತ್ತಿರುವ **ಮಹಾಂತಪ್ಪ ಎಲ್ಲಪ್ಪ ತಳವಾರ** ಇವರ ಹೆಸರನ್ನು **ಮಹಾಂತೇಶ ಯಲ್ಲಪ್ಪ ಪೂಜಾರ** ಎಂದು ಅವರ ಹೆಸರು ಬದಲಾವಣೆಗೆ ಅನುಮತಿ ನೀಡಲಾಗಿದೆ.

ಅಧೀಕ್ಷಕ ಅಭಿಯಂತರು, ಕರ್ನಾಟಕ ನೀರಾವರಿ ನಿಗಮ ನಿಯಮಿತ,

ಪಿ.ಡಿ. 12    ಘಟಪ್ರಭಾ ಬಲದಂಡೆ ಕಾಲುವೆ ನಿರ್ಮಾಣ ವೃತ್ತ, ಹಿಡಕಲ್ ಡ್ಯಾಮ್.

**ಕರ್ನಾಟಕ ಮೃಗಾಲಯ ಪ್ರಾಧಿಕಾರ**

**ಕಾರ್ಯನಿರ್ವಾಹಕ ನಿರ್ದೇಶಕರ ಕಛೇರಿ, ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು-83**

**ಅಲ್ಪಾವಧಿ ಮರು ಟೆಂಡರ್ ಪ್ರಕಟಣೆ ಸಂಖ್ಯೆ: ಎ4/ಬಬಪಾ/ಆರ್‌ಸಿ:ಝೂ ಸಿಆರ್-4/2004-05, ದಿನಾಂಕ: 28ನೇ ಜನವರಿ 2005**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಕಾಮಗಾರಿಗಳಿಗೆ ದಿನಾಂಕ: 14.02.2005 ರಂದು ಮಧ್ಯಾಹ್ನ 3.00 ಘಂಟೆಯವರೆಗೆ ಮೊಹರು ಮಾಡಿದ ಲಕೋಟೆಯಲ್ಲಿ ಈ ಕಛೇರಿಯಲ್ಲಿ ನೋಂದಾಯಿಸಿದ ಗುತ್ತಿಗೆದಾರರಿಂದ ಅಥವಾ ವರ್ಗ-3ರ ಮೇಲ್ಪಟ್ಟು ಪಿಡಬ್ಲ್ಯೂಡಿ/ಸಿಪಿಡಬ್ಲ್ಯೂಡಿ ಗುತ್ತಿಗೆದಾರರಿಂದ ಟೆಂಡರುಗಳನ್ನು ಆಹ್ವಾನಿಸಲಾಗಿದೆ.

**ಷೆಡ್ಯೂಲ್**

| ಕ್ರ. ಸಂ. | ಕಾಮಗಾರಿಗಳ ವಿವರಗಳು | ಟೆಂಡರಿನ ಅಂದಾಜು ಮೊತ್ತ (ರೂ.ಲಕ್ಷಗಳಲ್ಲಿ) | ಇ.ಎಂ.ಡಿ. (ರೂ.ಗಳಲ್ಲಿ) | ಕೆಲಸ ಪೂರ್ಣಗೊಳಿಸಲು ಅವಧಿ |
|---|---|---|---|---|
| 1 | ಪುನರ್ ವಸತಿ ಕೇಂದ್ರದಲ್ಲಿರುವ ಕ್ರಾಲ್ ಏರಿಯಾ ಚೈನ್‌ಲಿಂಕ್ ಮೆಶ್‌ಗೆ ಬಣ್ಣ ಬಳಿಯುವುದು. | ರೂ.5.00 ಲಕ್ಷ | ರೂ. 10,000/- | 35 ದಿನಗಳು |
| 2 | ಮೃಗಾಲಯದ ಕಾಂಪೌಂಡ್ ಗೋಡೆಗೆ ದುರಸ್ಥಿ ಮತ್ತು ಬಣ್ಣ ಬಳಿಯುವುದು. | ರೂ.3.00 ಲಕ್ಷ | ರೂ. 6,000/- | 30 ದಿನಗಳು |

**ಸೂಚನೆ:**

1. ಗುತ್ತಿಗೆದಾರರು ಪ್ರತಿ ಯೂನಿಟ್‌ಗೆ ರೂ.1000/- ಮತ್ತು ತೆರಿಗೆಗಳ ಪ್ರತ್ಯೇಕದ ಟೆಂಡರ್ ಫಾರಂನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ದಿನಾಂಕ: 11.02.2005 ರಿಂದ 14.02.2005ರ ಮಧ್ಯಾಹ್ನ 12.00 ಘಂಟೆಯವರೆಗೆ ಪಡೆಯಬಹುದು. ಟೆಂಡರನ್ನು ದಿನಾಂಕ: 14.02.2005 ರಂದು ಸಂಜೆ 4.00 ಘಂಟೆಗೆ ತೆರೆಯಲಾಗುವುದು.
2. ಹೆಚ್ಚಿನ ವಿವರಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು.

**ಕೆ.ಬಿ. ಮಾರ್ಕಂಡೇಯ, ಭಾ.ಅ.ಸೇ.**
ಕಾರ್ಯನಿರ್ವಾಹಕ ನಿರ್ದೇಶಕರು ಮತ್ತು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು-83.

**ZOO AUTHORITY OF KARNATAKA**

**OFFICE OF THE EXECUTIVE DIRECTOR, BANNERGHATTA BIOLOGICAL PARK, BANGALORE-560 083**

**BRIEF SHORT TERM RETENDER NOTIFICATION**

**No. A4-BBP-RC: Zoo-CR-4/2004-2005, Dated: 28th January 2005**

It is hereby notified for the general information of the public that sealed tenders are invited and will be received by the undersigned from the registered contractors of PWD/CPWD of Class III and above or the contractors registered in this office for the works noted in the schedule below:

**SCHEDULE**

| Sl. No. | Particulars of works | Approx cost of work put to tender | EMD to be furnished (Separately) | Time for execution of works |
|---|---|---|---|---|
| 1. | Painting of Chain link mesh of the kraal area at Rescue Center | Rs.5.00 lakhs | Rs.10,000/- | 35 days |
| 2. | Repairs & Painting to the existing compound wall of Zoo | Rs.3.00 lakhs | Rs.6,000/- | 30 days |

**CONDITIONS:**

1. The tender forms with detailed tender conditions can be had from the office of the undersigned during the office hours on working days on payment of Rs.1,000/- per form plus taxes from 11.02.2005 and up to 12.00 PM on 14.02.2005.
2. Receipt of tenders is up to 3.00 PM on 14.02.2005.
3. Opening of Tenders at 4.00 PM on 14.02.2005.
4. Further details can be had from the office of the undersigned during the office hours on working days.

**K.B. MARKANDAIAH, IFS**
PD-18
Executive Director & Deputy Conservator of Forests,
Bannerghatta Biological Park, Bangalore-83.

**ಪ್ರಾಂಶುಪಾಲರವರ ಕಛೇರಿ, ಸರ್ಕಾರಿ ತಾಂತ್ರಿಕ ಜವಳಿ ಸಂಸ್ಥೆ, ಕೆ.ಆರ್. ವೃತ್ತ, ಬೆಂಗಳೂರು-01**

**ಅಧಿಸೂಚನೆ ಸಂಖ್ಯೆ: ಐಟಿಟಿ:16:ಎಸ್‌ಪಿಎಸ್:2001, ದಿನಾಂಕ: 20ನೇ ಜನವರಿ 2005**

ಈ ಸಂಸ್ಥೆಯಲ್ಲಿನ ಅನುಪಯುಕ್ತ ವಸ್ತುಗಳನ್ನು (ಯಂತ್ರೋಪಕರಣ ಪೀಠೋಪಕರಣ ಇತ್ಯಾದಿ) ದಿನಾಂಕ: 10.03.2005 ರಂದು ಬೆಳಿಗ್ಗೆ 10.00 ಗಂಟೆಯಿಂದ ಮಧ್ಯಾಹ್ನ 1.00 ಗಂಟೆ ಒಳಗೆ ಬಹಿರಂಗ ಹರಾಜು ಮಾಡಲಾಗುವುದು. ಸಂಬಂಧಪಟ್ಟ ಸದರಿ ಬಿಡ್‌ದಾರರು ತಮಗೆ ಬಿಡ್ ಮಾಡಲಾದ ವಸ್ತುಗಳನ್ನು ಪಡೆಯಲು ಈ ಸಂಸ್ಥೆಯ ಕಛೇರಿಯಲ್ಲಿ ಮಾಹಿತಿ ಪಡೆದು ಸಂಪೂರ್ಣ ಹಣ ಪಾವತಿ ಮಾಡಿ ರಶೀದಿ ಪಡೆದು ಬಿಡ್ ಮಾಡಲಾದ ವಸ್ತುಗಳನ್ನು 8 (ಎಂಟು) ದಿನದ ಒಳಗೆ ತೆಗೆದುಕೊಂಡು ಹೋಗತಕ್ಕದ್ದು. ತಪ್ಪಿದಲ್ಲಿ ಬಿಡ್ ಮಾಡಲಾದ ಐಟಂಗಳ ಮೇಲೆ ಅವರಿಗೆ ಯಾವುದೇ ರೀತಿಯ ಹಕ್ಕು ಇರುವುದಿಲ್ಲ. ಹರಾಜು ಹಾಕಲಾಗುವ ವಸ್ತುಗಳು ಯಾವ ಸ್ಥಿತಿಯಲ್ಲಿ ಇರುತ್ತವೊ ಹಾಗೆ ಬಿಡ್‌ದಾರರು ಸ್ವೀಕರಿಸತಕ್ಕದ್ದು.

ಪಿ.ಆರ್. 56
ಪ್ರಾಂಶುಪಾಲರು, ಸರ್ಕಾರಿ ತಾಂತ್ರಿಕ ಜವಳಿ ಸಂಸ್ಥೆ, ಕೆ.ಆರ್.ವೃತ್ತ, ಬೆಂಗಳೂರು-1.

**IN THE COURT OF CITY CIVIL AND SESSIONS JUDGE AT BANGALORE**
**P & S.C.NO. 18/2000 CCH:11**

**PETITIONER:** Smt. SUSHEELA (MAJOR), W/o M. Krishnamurthy, No.125, 4th Cross, 2nd Main Road, Bhuvaneshwari Colony, Dohighat, Bangalore-560 019.

**V/S**

**RESPONDENT:** Sri S. BORAIAH, S/o late Siddaiah, No.84, 2nd Main Road, 3rd Cross, Bhuvaneshwari Colony, Dobhighat, Bangalore-560 019.

WHEREAS, the Petitioner above named filed the above case U/s 222 R/W Sec.372 of the Indian Succession Act for seeking probate of the will and for the grant of Succession Certificate of her mother Smt. Thayamma, W/o Siddaiah, who executed the will, dated: 03.12.97, and expired on 23.07.98.

This Notice is ordered to publish in the Gazette to bring it to the notice of the concerned or to any person or persons who has any right or rights or claims to be the legal heirs of late Smt. Thayamma and to take notice of this case and to appear before this Hon'ble Court on 5th day of February 2005 at 11.00 AM, the date on which the above case is posted.

Given under my hand and seal of this Hon'ble Court on this 20th day of January 2005 at Bangalore.

By Order of the Court,
Assistant Registrar, City Civil Court, Bangalore.

**SCHEDULE 'A'**

A house property situated at No.84, 2nd Main Road, Bhuvaneshwari Colony, Dobhighat, Basavanagudi, Bangalore-19, approximately measuring East to West: 16 feet, and North to South: 22 feet, which is bounded as below:-

East by : Site No.60
West by : 15 feet Road
North by : Site No.85
South by : 25 feet Road.

The approximate value of this property is Rs.75,000/- to Rs.1,00,000/- as the building is an old and in a dilapilated condition.

**SCHEDULE 'B'**

Gold Ornaments such as Gold Bangles, 4 in Nos, 1 Pair Jumki, 1 No. Kenne Chain, 2 Nos Finger rings, 1 No. Kal Chain, 1 No, Kal Kadaga and Silver small plates 2 Nos, and 2 Nos Tumblers, as the same were taken away by the Respondent soonafter the death of Smt. Thayamma, these movable properties are all in the custody of this Respondent which is approximately worth of Rs.30,000/-.

**SCHEDULE 'C'**

The amount which is due in the account of Smt. Thayamma towards Gratuity, Death relief fund and other benefits approximately Rs.60,000/- to Rs.70,000/-

By Order of the Court,
PD - 19 Assistant Registrar, City Civil Court, Bangalore.

**ಪೊಲೀಸ್ ಇಲಾಖೆ**

**ಪೊಲೀಸ್ ಅಡಿಷನಲ್ ಡೈರೆಕ್ಟರ್ ಜನರಲ್ ರವರ ಕಛೇರಿ, ರಾಜ್ಯ ಗುಪ್ತವಾರ್ತೆ, ನೃಪತುಂಗ ರಸ್ತೆ, ಬೆಂಗಳೂರು-01**

**ಅಧಿಸೂಚನೆ ಸಂಖ್ಯೆ: 109/ಸಿಬ್ಬಂದಿ-2/2002-03, ದಿನಾಂಕ: 31ನೇ ಜನವರಿ 2005**

**ಆಂಗ್ಲ ವರದಿಗಾರರ (ಬ್ಯಾಕ್ ಲಾಗ್) ಹುದ್ದೆಗೆ ಅರ್ಜಿ ಸ್ವೀಕಾರ ದಿನಾಂಕದ ವಿಸ್ತರಣೆ**

ದಿನಾಂಕ: 15.01.2005 ರಂದು ಪ್ರಕಟವಾಗಿದ್ದ ಅಧಿಸೂಚನೆಯಲ್ಲಿ ಆಂಗ್ಲ ವರದಿಗಾರರ ಹುದ್ದೆಗೆ (1 ಹುದ್ದೆ) ಪರಿಶಿಷ್ಟ ಪಂಗಡ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದ್ದು, ಅರ್ಜಿ ಸಲ್ಲಿಸಲು ಕಡೆಯ ದಿನಾಂಕವನ್ನು 31.01.2005 ರಿಂದ 25.02.2005 ರವರೆಗೆ ವಿಸ್ತರಿಸಲಾಗಿದೆ. ಉಳಿದ ಷರತ್ತುಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ. ಆಸಕ್ತಿ ಇದ್ದ ಅರ್ಹ **ಪರಿಷ್ಟ ಪಂಗಡ ಅಭ್ಯರ್ಥಿಗಳು ಅರ್ಜಿಯನ್ನು ಸೀಲು ಮಾಡಿದ** ಲಕೋಟೆಯಲ್ಲಿ ಈ ಕಛೇರಿಗೆ 25.02.2005 ರೊಳಗೆ ಸಲ್ಲಿಸಬಹುದಾಗಿದೆ.

ಪಿ.ಆರ್. 60 ಡೆಪ್ಯೂಟಿ ಪೊಲೀಸ್ ಇನ್ಸ್‌ಪೆಕ್ಟರ್ ಜನರಲ್, ರಾಜ್ಯ ಗುಪ್ತವಾರ್ತೆ.

**ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರ ಕಛೇರಿ,**

**ನಂ.17, ಜಯನಿವಾಸ, ಶಂಕರಮಠ ರಸ್ತೆ, ಬಸವನಗುಡಿ, ಬೆಂಗಳೂರು-560 004**

**ಟೆಂಡರ್ ಮತ್ತು ಬಹಿರಂಗ ಹರಾಜು**

**ಪ್ರಕಟಣೆ ಸಂಖ್ಯೆ: ಎಸ್.ಟಿ.ಎನ್./ವಾ.ಹ.ಟೆಂಡರ್/47/2004-05, ದಿನಾಂಕ: 25ನೇ ಜನವರಿ 2005**

ಈ ಕಛೇರಿಯ ಹಳೆಯ ಪೆಟ್ರೋಲ್ ವಾಹನ ಅಂಬಾಸಿಡರ್ ಕಾರ್ ಸಂಖ್ಯೆ: ಸಿಎಜೆ-1693ನ್ನು ಟೆಂಡರ್ ಹಾಗೂ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ವಾಹನದ ವಿವರ ಈ ಕೆಳಕಂಡಂತಿದೆ.

| ಕ್ರ.ಸಂ. | ವಾಹನ ಸಂಖ್ಯೆ | ಮಾದರಿ | ತಯಾರಿಕೆ ವರ್ಷ |
|---|---|---|---|
| 01 | ಸಿಎಜೆ-1693 | ಅಂಬಾಸಿಡರ್ ಕಾರ್ (ಪೆಟ್ರೋಲ್) | 1984 |

ಟೆಂಡರ್ ಮತ್ತು ಬಹಿರಂಗ ಹರಾಜಿನಲ್ಲಿ ಭಾಗವಹಿಸುವವರು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಭಾಗವಹಿಸತಕ್ಕದ್ದು.

1. ಆಸಕ್ತಿಯುಳ್ಳ ವ್ಯಕ್ತಿಗಳು ಮೇಲೆ ತಿಳಿಸಿದ ವಾಹನ ಅಂಬಾಸಿಡರ್ ಸಂಬಂಧವಾಗಿ ಮೊಹರಾದ ಲಕೋಟೆಯಲ್ಲಿ ತಮ್ಮ ಟೆಂಡರ್‌ನ್ನು ಮಾತ್ರ ನಿರ್ದೇಶಕರು, ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಇಲಾಖೆ, ಇವರಿಗೆ ದಿನಾಂಕ: 26.02.2005 ರಂದು ಬೆಳಿಗ್ಗೆ 11.30 ಘಂಟೆ ಅಥವಾ ಅದಕ್ಕೂ ಮುಂಚೆ ತಲುಪುವಂತೆ ಸಲ್ಲಿಸಬೇಕು.
2. ಹರಾಜು ಮಾರಾಟವು 26.02.2005 ರಂದು ಮಧ್ಯಾಹ್ನ 12.30 ಘಂಟೆಗೆ ಮೇಲೆ ತಿಳಿಸಿರುವ ಕಛೇರಿಯ ಆವರಣದಲ್ಲಿ ಪ್ರಾರಂಭವಾಗುವುದು. ಆಸಕ್ತಿಯುಳ್ಳ ಸವಾಲುಗಾರರು ಸಾರ್ವತ್ರಿಕ ರಜೆ ದಿನಗಳನ್ನು ಹೊರತುಪಡಿಸಿ ಬೆಳಿಗ್ಗೆ 11.30 ಘಂಟೆಯಿಂದ ಸಾಯಂಕಾಲ 5.00 ಘಂಟೆಯವರೆಗೆ ವಾಹನವನ್ನು ಈ ಕಛೇರಿಯ ಆವರಣದಲ್ಲಿ ಪರೀಕ್ಷಿಸಬಹುದು. ಮೇಲೆ ತಿಳಿಸಿದ ವಾಹನದ ಬಗ್ಗೆ ಯಾವುದೇ ಖಾತರಿ ನೀಡಲಾಗುವುದಿಲ್ಲ. ವಾಹನವನ್ನು ಇದ್ದಲ್ಲಿ ಇದ್ದಂತೆಯೇ ವಿಲೇವಾರಿ ಮಾಡಲಾಗುವುದು ಮತ್ತು ಹಾಗೆಯೇ ತೆಗೆದುಕೊಂಡು ಹೋಗಬೇಕು. ಈ ಸಂಬಂಧವಾಗಿ ಯಾವುದೇ ಪತ್ರ ವ್ಯವಹಾರವನ್ನು ಪುರಸ್ಕರಿಸುವುದಿಲ್ಲ.
3. ಟೆಂಡರನ್ನು ಮೊಹರಾದ ಲಕೋಟೆಯ ಮೇಲೆ "ಹಳೆಯ ಸಿಎಜಿ-1693 ಅಂಬಾಸಿಡರ್ ಪೆಟ್ರೋಲ್ ಕಾರ್ ವಿಲೇವಾರಿಗೆ ಟೆಂಡರ್" ಎಂದು ಮೇಲ್ಬರಹ ಬರೆದು ಸಲ್ಲಿಸಬೇಕು.
4. ಟೆಂಡರ್‌ನ ಮುಂಗಡವಾಗಿ ರೂ.3,000.00ವನ್ನು (ಮೂರು ಸಾವಿರ ರೂಪಾಯಿಗಳು ಮಾತ್ರ) ಠೇವಣಿಯಾಗಿ (ಇಎಂಡಿ) ಪ್ರತ್ಯೇಕವಾಗಿ ಡೈರೆಕ್ಟರ್ ಆಫ್ ಕೋ-ಆಪರೇಟಿವ್ ಆಡಿಟ್ (Director of Cooperative Audit), ರವರ ಹೆಸರಿನಲ್ಲಿ ಪಡೆದ ಡಿ.ಡಿ. ಮುಖಾಂತರ ಸಲ್ಲಿಸಬೇಕು. (ಟೆಂಡರ್ ಲಕೋಟೆಯಲ್ಲಿ ಡಿ.ಡಿ. ಯನ್ನು ಇರಿಸಕೂಡದು) ಮತ್ತು ಡಿ.ಡಿ. ನೀಡಿದ್ದಕ್ಕೆ ಸ್ವೀಕೃತಿಯನ್ನು ಪಡೆಯತಕ್ಕದ್ದು. ಈ ಮುಂಗಡ ಠೇವಣಿಗೆ ಯಾವುದೇ ಬಡ್ಡಿ ನೀಡಲಾಗುವುದಿಲ್ಲ.
5. ಠೇವಣಿ ಹಣವನ್ನು (ಡಿ.ಡಿ.) ಅತಿ ಹೆಚ್ಚಿನ ಅಂತಿಮ ಬಹಿರಂಗ ಹರಾಜು ಕಂ ಟೆಂಡರ್‌ದಾರರೆಂದು ಪರಿಗಣಿಸಿ, ಉಳಿದವರಿಗೆ ಠೇವಣಿ ಹಣವನ್ನು (ಡಿ.ಡಿ.) ಹರಾಜು ಮುಗಿದ ನಂತರ ಸ್ಥಳದಲ್ಲಿಯೇ ಹಿಂದಿರುಗಿಸಲಾಗುವುದು.
6. ಮುಂಗಡ ಹಣ ಠೇವಣಿ (ಡಿ.ಡಿ.) ಹೊಂದಿರದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
7. ಟೆಂಡರ್ ಯಾವುದೇ ಷರತ್ತು ಹೊಂದಿರತಕ್ಕದ್ದಲ್ಲ ಮತ್ತು ಷರತ್ತು ಹೊಂದಿದ್ದರೆ ಅಂತಹ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
8. ಅತಿ ಹೆಚ್ಚು ಬಹಿರಂಗ/ಟೆಂಡರ್‌ದಾರರು ಸ್ಥಳದಲ್ಲಿಯೇ ಪೂರ್ತಿ ಹಣವನ್ನು ನಗದಾಗಿ ಪಾವತಿಸತಕ್ಕದ್ದು.
9. ಮೊದಲನೆ ಅತಿ ಹೆಚ್ಚಿನ ಬಹಿರಂಗ ಹರಾಜು ಕಂ ಟೆಂಡರ್‌ದಾರರು ಹಣ ಪಾವತಿಸಿದ ನಂತರವೇ ಎರಡನೇ ಅತಿ ಹೆಚ್ಚಿನ ಅಂತಿಮ ಬಹಿರಂಗ ಹರಾಜು ಕಂ ಟೆಂಡರ್‌ದಾರರ ಹಣವನ್ನು ವಾಪಾಸು ಮಾಡಲಾಗುವುದು. ಒಂದು ವೇಳೆ ಮೊದಲನೇ ಅತಿ ಹೆಚ್ಚಿನ ಬಹಿರಂಗ ಹರಾಜು ಕಂ ಟೆಂಡರ್‌ದಾರರು ಪೂರ್ತಿ ಹಣ ಪಾವತಿಸದೇ ಇದ್ದಲ್ಲಿ ಅದೇ ದಿನ ಎರಡನೇ ಬಿಡ್ದುದಾರರು ಆರ್.ಟಿ.ಓ. ಅವರು ನಿಗದಿಪಡಿಸಿದ ಹಣಕ್ಕಿಂತ ಹೆಚ್ಚಿಗೆ ಬಹಿರಂಗ ಹರಾಜು ಕಂ ಟೆಂಡರ್ ಇದ್ದಲ್ಲಿ ನೀಡಲಾಗುವುದು.
10. ಹರಾಜು ಕಂ ಟೆಂಡರ್ ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರ ಹರಾಜು ಕಂ ಟೆಂಡರ್ ಪ್ರಕ್ರಿಯೆ ನಡೆಸುವ ಪ್ರಾಧಿಕಾರಕ್ಕೆ ಸೇರುತ್ತದೆ.
11. ಹರಾಜು ಕಂ ಟೆಂಡರ್ ಪ್ರಾರಂಭವಾಗುವ ಸಮಯಕ್ಕೆ ಸರಿಯಾಗಿ ಎಲ್ಲಾ ಬಿಡ್ದುದಾರರು ಭಾಗವಹಿಸತಕ್ಕದ್ದು. ಕಂಡಿಕೆ (2) ರಲ್ಲಿ ತಿಳಿಸಿರುವಂತೆ ಹರಾಜು ಪ್ರಕ್ರಿಯೆ ಮುಗಿದ ನಂತರ ಬಂದ ಸವಾಲುದಾರರಿಗೆ ಯಾವುದೇ ಹಕ್ಕು ಇರುವುದಿಲ್ಲ.
12. ಹರಾಜು ಕಂ ಟೆಂಡರ್‌ನಲ್ಲಿ ಭಾಗವಹಿಸುವವರು ಈ ಎಲ್ಲಾ ನಿಯಮದ ಷರತ್ತುಗಳನ್ನು ಒಪ್ಪಿಕೊಳ್ಳಲು ಬದ್ಧರಿದ್ದೇವೆಂದು ಈ ಕಛೇರಿಯ ಹರಾಜು ಕಂ ಟೆಂಡರ್ ಪುಸ್ತಕದಲ್ಲಿ ಸಹಿ ಮಾಡತಕ್ಕದ್ದು.
13. ಯಶಸ್ವಿ ಟೆಂಡರ್‌ದಾರ/ಸವಾಲುದಾರರು ಸವಾಲಿನ ಬೆಲೆಯನ್ನು ಅದೇ ದಿನ ನಗದು ಪಾವತಿಸತಕ್ಕದ್ದು. ತಪ್ಪಿದಲ್ಲಿ ಠೇವಣಿಯಾಗಿದ್ದ ಮುಂಗಡ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುತ್ತದೆ.
14. ನಿರ್ದೇಶಕರು ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಇಲಾಖೆ ರವರು ಮಾರಾಟವನ್ನು ಖಚಿತಪಡಿಸಿದ ನಂತರ ಮಾರಾಟವು ಪೂರ್ಣಗೊಳ್ಳುತ್ತದೆ.
15. ಕರ್ನಾಟಕ ಮಾರಾಟ ತೆರಿಗೆ/ಕೇಂದ್ರ ಮಾರಾಟ ತೆರಿಗೆ (ಸಂದರ್ಭಾನುಸಾರ) ಪ್ರಚಲಿತ ದರದಂತೆ ಅನ್ವಯವಾಗುವಂತೆ, ಅದೇ ದಿನ ಪಾವತಿಸಬೇಕು. ಟೆಂಡರ್ ಕಂ ಹರಾಜು ಹಣ ಮತ್ತು ಇದಕ್ಕೆ ಅನ್ವಯವಾಗುವ ತೆರಿಗೆಗಳು ಪ್ರತ್ಯೇಕವಾಗಿರುತ್ತದೆ.
16. ಸಂದಾಯ/ವಶಾವಣೆ/ಎಲ್ಲಾ ತೆರಿಗೆ/ಕೇಂದ್ರ ಮಾರಾಟ ತೆರಿಗೆಗಳು ಮತ್ತು ಸುಂಕಗಳು ಪ್ರತ್ಯೇಕವಾಗಿರತಕ್ಕದ್ದು. ವಾಹನಗಳ ಹಣ ಸಂದಾಯದ ವಶಾವಣೆ ಪಡೆಯುವ ಸಂದರ್ಭದಲ್ಲಿ ಅನ್ವಯವಾಗುವ ತೆರಿಗೆಗಳ ಜೊತೆಗೆ ಟೆಂಡರ್ ಕಂ ಹರಾಜು ಹಣವನ್ನು ನಿರ್ದೇಶಕರು, ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಇಲಾಖೆ, ಇವರಿಗೆ ಸಂದಾಯ ಮಾಡತಕ್ಕದ್ದು. ತೆರಿಗೆಗಳ ಜೊತೆಗೆ ಟೆಂಡರ್ ಹಾಗೂ ಮಾರಾಟದಿಂದ ಬಂದ ಹಣವನ್ನು ಸಂದಾಯ ಮಾಡಿ ನಿರ್ದೇಶಕರು, ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಇಲಾಖೆ, ಬೆಂಗಳೂರು, ಇವರಿಂದ ಪಡೆದ ವಶಾವಣೆ ಆದೇಶವನ್ನು ಪಡೆದ ನಂತರವೇ ವಾಹನವನ್ನು ತೆಗೆದುಕೊಂಡು ಹೋಗಲು ಅನುಮತಿಸಲಾಗುವುದು.
17. ವಾಹನವನ್ನು ಇದ್ದಲ್ಲಿ ಇದ್ದಂತೆಯೇ ಮಾರಾಟ ಮಾಡುವುದರಿಂದ ಕೊಳ್ಳುವವರು ತಮ್ಮೊಂದಿಗೆ ವರ್ಗಾವಣೆ ಆದೇಶದ ಪ್ರತಿಗಳು, ಮಾರಾಟ ತೆರಿಗೆ ಫಾರಂ ಇತರ ಯಾವುದೇ ಚಲನ್‌ಗಳನ್ನು ವ್ಯವಸ್ಥೆ ಮಾಡಿಕೊಳ್ಳುವ ಜವಾಬ್ದಾರಿಯನ್ನು ಕೊಳ್ಳುವವರೆ ವ್ಯವಸ್ಥೆ ಮಾಡಿಕೊಳ್ಳತಕ್ಕದ್ದು.
18. ಟೆಂಡರ್ ಕಂ ಹರಾಜು ಪ್ರಕ್ರಿಯೆ ಮುಗಿದ ನಂತರ (ಕಂಡಿಕೆ 14 ರಲ್ಲಿ ತಿಳಿಸಿರುವಂತೆ) ಆರ್.ಸಿ. ಪುಸ್ತಕ ಮತ್ತು ತೆರಿಗೆ ವಿನಾಯಿತಿ ಪತ್ರಗಳನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೋರಮಂಗಲ, ಬೆಂಗಳೂರು, ರವರಿಗೆ ವಾಹನ ವರ್ಗಾವಣೆಗೆ ಕಳುಹಿಸಲಾಗುವುದು.
19. ಈ ಹರಾಜು ಕಂ ಟೆಂಡರ್ ಈ ಕಛೇರಿಯ ಪ್ರಾಧಿಕಾರಕ್ಕೆ ಒಳಪಟ್ಟಿರುತ್ತದೆ ಮತ್ತು ಇದರ ಕುರಿತು ನ್ಯಾಯಾಲಯದಲ್ಲಿ ಪ್ರಶ್ನಿಸುವಂತಿರುವುದಿಲ್ಲ.
20. ಹರಾಜಿನಲ್ಲಿ ಬಿಡ್ ಮಾಡಿದ ವಾಹನವನ್ನು ನಿರ್ದೇಶಕರಿಂದ ಅನುಮೋದನೆ ಪಡೆದ ನಂತರ ತಮಗೆ ತಿಳಿಸಿದ ದಿನಾಂಕದೊಳಗೆ ಈ ಕಛೇರಿಯ ಆವರಣದಿಂದ ತೆಗೆದುಕೊಂಡು ಹೋಗತಕ್ಕದ್ದು. ಹೀಗೆ ವಾಹನವನ್ನು ತೆಗೆದುಕೊಂಡು ಹೋಗದೆ ಇದ್ದಲ್ಲಿ ವಾಹನದ ಜವಾಬ್ದಾರಿಯು ಕೊಂಡುಕೊಳ್ಳುವವರದ್ದಾಗಿರುತ್ತದೆ.

**ಟಿ.ಎ. ಪಾರ್ಥಸಾರಥಿ**

ಪಿ.ಆರ್. 64 ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರು.

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಪ್ರಾದೇಶಿಕ ಅರಣ್ಯ ವಿಭಾಗ, ತುಮಕೂರು

**ಅರಣ್ಯ ಕಾಮಗಾರಿಗಳ ಟೆಂಡರ್ ಸಂಖ್ಯೆ: ಎ.ಅಕಾ/ಟೆಂಡರ್/ನಿವ.21:2004-05, ದಿನಾಂಕ: 24ನೇ ಜನವರಿ 2005**

ಈ ಮೂಲಕ ತಿಳಿಯಪಡಿಸುವುದೇನೆಂದರೆ 2004-05ನೇ ಸಾಲಿನಲ್ಲಿ ತುಮಕೂರು ಪ್ರಾದೇಶಿಕ ಅರಣ್ಯ ವಿಭಾಗದ ವ್ಯಾಪ್ತಿಗೆ ಒಳಪಡುವ ವಲಯಗಳಲ್ಲಿನ ಈ ಕೆಳಕಂಡ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ಈ ವಿಭಾಗದಲ್ಲಿ 2004-05ನೇ ಸಾಲಿಗೆ ನೋಂದಾಯಿಸಿದ ಅರಣ್ಯ ಗುತ್ತಿಗೆದಾರರಿಂದ ಪ್ರತಿಯೊಂದು ಕಾಮಗಾರಿಗೆ ಪ್ರತ್ಯೇಕ ವಲಯವಾರು ಮೊಹರಾದ ಪ್ರತಿ ಕಾಮಗಾರಿಗೆ ಶೇಕಡಾವಾರು ಟೆಂಡರ್ ಕರೆಯಲಾಗಿದೆ. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ದಿನಾಂಕ: 21.2.2005 ರಂದು 3.00 ಗಂಟೆಯವರೆಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ತುಮಕೂರು ವಿಭಾಗ, ತುಮಕೂರು ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿಗಳು ಸ್ವೀಕರಿಸುವರು.

**ಷೆಡ್ಯೂಲ್**

| ಕ್ರ. ಸಂ. | ಯೋಜನೆ | ಸ್ಥಳ ಮತ್ತು ಕಾಮಗಾರಿಯ ವಿವರ (2005ನೇ ಮಳೆಗಾಲದಲ್ಲಿ ನೆಡುತೋಪು ಬೆಳೆಸಲು ಮುಂಗಡವಾಗಿ ಪಿಟ್ಸ್, ಸಿಪಿಟಿ ತೆಗೆಯುವುದು ಮತ್ತು ರಿಪ್ಪಿಂಗ್ ಮಾಡುವುದು ಇತ್ಯಾದಿ) | ಮಾದರಿ | ಭೌತಿಕ ಪರಿಮಾಣ (ಹೆ./ ಕಿ.ಮೀ.ಗಳಲ್ಲಿ) | ಅಂದಾಜು ಮೊತ್ತ | ನಿಗದಿ ಪಡಿಸಿದ ಇಎಂಡಿ ಮೊತ್ತ |
|---|---|---|---|---|---|---|
| 1 | 2 | 3 | 4 | 5 | 6 | 7 |
| | | **I) ಮಧುಗಿರಿ ವಲಯ** | | | | |
| | | **1) ಬಡವನಹಳ್ಳಿ ಮೀ.ಅ./ಗಿಡದಾಗಲಹಳ್ಳಿ ಗ್ರಾ.ಅ.ಸ. ವ್ಯಾಪ್ತಿ** | | | | |
| 1 | ಬೇರಿ | i) Preparing the site by dozing and uprooting existing growth, creation of intermittent bunds across the slope and using the debris as check-dams on depressions, using 220 HP. D-80 buldozers (including road and inspection path forming) | Engergy Forest | 40 | 14800 | 400 |
| | | ii) 68800 ಆರ್.ಎಂ.ಟಿ.ಆರ್. ರಿಪ್ಪಿಂಗ್ ಮಾಡುವುದು (Ripping by 220 HP D-80 buldozer) | | 40 | 158240 | 4000 |
| | | iii) ಸಿಪಿಟಿ ತೆಗೆಯುವುದು | | 2.8 Km. | 152640 | 3800 |
| | | **2) ಬಡವನಹಳ್ಳಿ ಮೀ.ಅ./ಬೋರೆಕುಂಟೆ ಗ್ರಾಮ** | | | | |
| | | i) Preparing the site by dozing and uprooting existing growth, creation of intermittent bunds across the slope and using the debris as check-dams on depressions, using 220 HP. D-80 buldozers (including road and inspection path forming) | Energy Forest | 40 | 14800 | 400 |
| | | ii) 68800 ಆರ್.ಎಂ.ಟಿ.ಆರ್. ರಿಪ್ಪಿಂಗ್ ಮಾಡುವುದು (Ripping by 220 HP D-80 buldozer) | | 40 | 158240 | 4000 |
| | | iii) ಸಿಪಿಟಿ ತೆಗೆಯುವುದು | | 2.8 Km. | 152640 | 3800 |
| | ಬೇರಿ | **3) ಎ.ಎಂ. ಕಾವಲ್** | | | | |
| | | i) Preparing the site by dozing and uprooting existing growth, creation of intermittent bunds across the slope and using the debris as check-dams on depressions, using 220 HP. D-80 buldozers (including road and inspection path forming) | Energy Forest | 15 | 5550 | 150 |
| | | ii) 25800 ಆರ್.ಎಂ.ಟಿ.ಆರ್. ರಿಪ್ಪಿಂಗ್ ಮಾಡುವುದು (Ripping by 220 HP D-80 buldozer) | | 15 | 59340 | 1500 |
| | | iii) ಸಿಪಿಟಿ ತೆಗೆಯುವುದು | | 1.05 Km. | 57240 | 1450 |
| | | **4) ಮಾದೇನಹಳ್ಳಿ (Out side the cluster Village)** | | | | |
| | | i) Preparing the site by dozing and uprooting existing growth, creation of intermittent bunds across the slope and using the debris as check-dams on depressions, using 220 HP. D-80 buldozers (including road and inspection path forming) | Energy Forest | 30 | 11100 | 300 |

| 1 | 2 | 3 | 4 | 5 | 6 | 7 |
|---|---|---|---|---|---|---|
| | | ii) 51600 ಆರ್.ಎಂ.ಟಿ.ಆರ್. ರಿಪ್ಪಿಂಗ್ ಮಾಡುವುದು (Ripping by 220 HP D-80 buldozer) | | 30 | 118680 | 3000 |
| | | iii) ಸಿಪಿಟಿ ತೆಗೆಯುವುದು | | 2.10 Km. | 114480 | 2900 |
| | | **5) ಎ.ಎಂ. ಕಾವಲ್ / ಮಾದೇನಹಳ್ಳಿ (Out side the cluster Village)** | | | | |
| | | i) Preparing the site by dozing and uprooting existing growth, creation of intermittent bunds across the slope and using the debris as check-dams on depressions, using 220 HP. D-80 buldozers (including road and inspection path forming) | Energy Forest | 30 | 11100 | 300 |
| | | ii) 51600 ಆರ್.ಎಂ.ಟಿ.ಆರ್. ರಿಪ್ಪಿಂಗ್ ಮಾಡುವುದು (Ripping by 220 HP D-80 buldozer) | | 30 | 118680 | 3000 |
| | | iii) ಸಿಪಿಟಿ ತೆಗೆಯುವುದು | | 2.10 Km. | 114480 | 2900 |
| | | **6) ಮುದ್ದಪ್ಪನಹಳ್ಳಿ (Out side the cluster Village)** | | | | |
| | | i) Preparing the site by dozing and uprooting existing growth, creation of intermittent bunds across the slope and using the debris as check-dams on depressions, using 220 HP. D-80 buldozers (including road and inspection path forming) | Energy Forest | 15 | 5550 | 150 |
| | | ii) 25800 ಆರ್.ಎಂ.ಟಿ.ಆರ್. ರಿಪ್ಪಿಂಗ್ ಮಾಡುವುದು (Ripping by 220 HP D-80 buldozer) | | 15 | 59340 | 1500 |
| | | iii) ಸಿಪಿಟಿ ತೆಗೆಯುವುದು | | 1.05 Km. | 57240 | 1450 |
| | | **II) ಗುಬ್ಬಿ ವಲಯ** | | | | |
| | | **7) ಬೋಡತಿಮ್ಮನಹಳ್ಳಿ (ಅಂಕಸಂದ್ರ) ಸ.ನಂ.10** | | | | |
| | | i) Preparing the site by dozing and uprooting existing growth, creation of intermittent bunds across the slope and using the debris as check-dams on depressions, using 220 HP. D-80 buldozers (including road and inspection path forming) | Energy Forest | 25 | 9250 | 250 |
| | | ii) 43000 ಆರ್.ಎಂ.ಟಿ.ಆರ್. ರಿಪ್ಪಿಂಗ್ ಮಾಡುವುದು (Ripping by 220 HP D-80 buldozer) | | 25 | 98900 | 2500 |
| | | iii) ಸಿಪಿಟಿ ತೆಗೆಯುವುದು | | 1.75 Km. | 95400 | 2400 |
| | | **8) ಬೋಡತಿಮ್ಮನಹಳ್ಳಿ (ಅಂಕಸಂದ್ರ) ಸ.ನಂ.9** | | | | |
| | | i) Preparing the site by dozing and uprooting existing growth, creation of intermittent bunds across the slope and using the debris as check-dams on depressions, using 220 HP. D-80 buldozers (including road and inspection path forming) | Energy Forest | 25 | 9250 | 250 |
| | | ii) 43000 ಆರ್.ಎಂ.ಟಿ.ಆರ್. ರಿಪ್ಪಿಂಗ್ ಮಾಡುವುದು (Ripping by 220 HP D-80 buldozer) | | 25 | 98900 | 2500 |
| | | iii) ಸಿಪಿಟಿ ತೆಗೆಯುವುದು | | 1.75 Km. | 95400 | 2400 |
| | | **9) ದಾಸಪ್ಪನಹಳ್ಳಿ (ಅಂಕಸಂದ್ರ) ಸ.ನಂ.35** | | | | |
| | | i) Preparing the site by dozing and uprooting existing growth, creation of intermittent bunds across the slope and using the debris as check-dams on depressions, using 220 HP. D-80 buldozers (including road and inspection path forming) | Energy Forest | 25 | 9250 | 250 |

| 1 | 2 | 3 | 4 | 5 | 6 | 7 |
|---|---|---|---|---|---|---|
| | ಬೇರಿ | ii) 43000 ಆರ್.ಎಂ.ಟಿ.ಆರ್. ರಿಪ್ಪಿಂಗ್ ಮಾಡುವುದು (Ripping by 220 HP D-80 buldozer | | 25 | 98900 | 2500 |
| | | iii) ಸಿಪಿಟಿ ತೆಗೆಯುವುದು | | 1.75 Km. | 95400 | 2400 |
| | | **10) ದಾಸಪ್ಪನಹಳ್ಳಿ (ಅಂಕಸಂದ್ರ) ಸ.ನಂ.34** | | | | |
| | | i) Preparing the site by dozing and uprooting existing growth, creation of intermittent bunds across the slope and using the debris as check-dams on depressions, using 220 HP. D-80 buldozers (including road and inspection path forming) | Energy Forest | 25 | 9250 | 250 |
| | | ii) 43000 ಆರ್.ಎಂ.ಟಿ.ಆರ್. ರಿಪ್ಪಿಂಗ್ ಮಾಡುವುದು (Ripping by 220 HP D-80 buldozer) | | 25 | 98900 | 2500 |
| | | iii) ಸಿಪಿಟಿ ತೆಗೆಯುವುದು | | 1.75 Km. | 95400 | 2400 |
| | | **11) ಕುರುಬರಹಳ್ಳಿ (ಅಂಕಸಂದ್ರ) ಸ.ನಂ.18** | | | | |
| | | i) Preparing the site by dozing and uprooting existing growth, creation of intermittent bunds across the slope and using the debris as check-dams on depressions, using 220 HP. D-80 buldozers (including road and inspection path forming) | Energy Forest | 25 | 9250 | 250 |
| | | ii) 43000 ಆರ್.ಎಂ.ಟಿ.ಆರ್. ರಿಪ್ಪಿಂಗ್ ಮಾಡುವುದು (Ripping by 220 HP D-80 buldozer) | | 25 | 98900 | 2500 |
| | | iii) ಸಿಪಿಟಿ ತೆಗೆಯುವುದು | | 1.75 Km. | 95400 | 2400 |
| | | **12) ಕುರುಬರಹಳ್ಳಿ (ಅಂಕಸಂದ್ರ) ಸ.ನಂ.19** | | | | |
| | | i) Preparing the site by dozing and uprooting existing growth, creation of intermittent bunds across the slope and using the debris as check-dams on depressions, using 220 HP. D-80 buldozers (including road and inspection path forming) | Energy Forest | 25 | 9250 | 250 |
| | | ii) 43000 ಆರ್.ಎಂ.ಟಿ.ಆರ್. ರಿಪ್ಪಿಂಗ್ ಮಾಡುವುದು (Ripping by 220 HP D-80 buldozer) | | 25 | 98900 | 2500 |
| | | iii) ಸಿಪಿಟಿ ತೆಗೆಯುವುದು | | 1.75 Km. | 95400 | 2400 |
| | | **13) ಕುರುಬರಹಳ್ಳಿ (ಅಂಕಸಂದ್ರ) ಸ.ನಂ.20, 21** | | | | |
| | | i) Preparing the site by dozing and uprooting existing growth, creation of intermittent bunds across the slope and using the debris as check-dams on depressions, using 220 HP. D-80 buldozers (including road and inspection path forming) | Energy Forest | 25 | 9250 | 250 |
| | | ii) 43000 ಆರ್.ಎಂ.ಟಿ.ಆರ್. ರಿಪ್ಪಿಂಗ್ ಮಾಡುವುದು (Ripping by 220 HP D-80 buldozer) | | 25 | 98900 | 2500 |
| | | iii) ಸಿಪಿಟಿ ತೆಗೆಯುವುದು | | 1.75 Km. | 95400 | 2400 |
| **III) ಶಿರಾ ವಲಯ** | | | | | | |
| | | **14) ತಿಪ್ಪನಹಳ್ಳಿ (Out side the cluster Village) S.N.9, 20 to 24** | | | | |
| | | i) Preparing the site by dozing and uprooting existing growth, creation of intermittent bunds across the slope and using the debris as check-dams on depressions, using 220 HP. D-80 buldozers (including road and inspection path forming) | Energy Forest | 30 | 11100 | 300 |

| 1 | 2 | 3 | 4 | 5 | 6 | 7 |
|---|---|---|---|---|---|---|
| | | ii) 51600 ಆರ್.ಎಂ.ಟಿ.ಆರ್. ರಿಪ್ಪಿಂಗ್ ಮಾಡುವುದು (Ripping by 220 HP D-80 buldozer) | | 30 | 118680 | 3000 |
| | | iii) ಸಿಪಿಟಿ ತೆಗೆಯುವುದು | | 2.1 Km. | 114480 | 2900 |
| | | **15) ತಿಪ್ಪನಹಳ್ಳಿ (Out side the cluster Village) S.N.28, 29, 31 to 38** | | | | |
| | | i) Preparing the site by dozing and uprooting existing growth, creation of intermittent bunds across the slope and using the debris as check-dams on depressions, using 220 HP. D-80 buldozers (including road and inspection path forming) | Energy Forest | 30 | 11100 | 300 |
| | | ii) 51600 ಆರ್.ಎಂ.ಟಿ.ಆರ್. ರಿಪ್ಪಿಂಗ್ ಮಾಡುವುದು (Ripping by 220 HP D-80 buldozer) | | 30 | 118680 | 3000 |
| | | iii) ಸಿಪಿಟಿ ತೆಗೆಯುವುದು | | 2.1 Km. | 114480 | 2900 |
| | | **16) ಹಳೇಬೀಜನಹಳ್ಳಿ (Out side the cluster Village)** | | | | |
| | ಬೇರಿ | i) Preparing the site by dozing and uprooting existing growth, creation of intermittent bunds across the slope and using the debris as check-dams on depressions, using 220 HP. D-80 buldozers (including road and inspection path forming) | Energy Forest | 30 | 11100 | 300 |
| | | ii) 51600 ಆರ್.ಎಂ.ಟಿ.ಆರ್. ರಿಪ್ಪಿಂಗ್ ಮಾಡುವುದು (Ripping by 220 HP D-80 buldozer) | | 30 | 118680 | 3000 |
| | | iii) ಸಿಪಿಟಿ ತೆಗೆಯುವುದು | | 2.1 Km. | 114480 | 2900 |
| | | **17) ಸೀಬಿ (Out side the cluster Village) S.No. 181, 192, 188** | | | | |
| | | i) Preparing the site by dozing and uprooting existing growth, creation of intermittent bunds across the slope and using the debris as check-dams on depressions, using 220 HP. D-80 buldozers (including road and inspection path forming) | Energy Forest | 30 | 11100 | 300 |
| | | ii) 51600 ಆರ್.ಎಂ.ಟಿ.ಆರ್. ರಿಪ್ಪಿಂಗ್ ಮಾಡುವುದು (Ripping by 220 HP D-80 buldozer) | | 30 | 118680 | 3000 |
| | | iii) ಸಿಪಿಟಿ ತೆಗೆಯುವುದು | | 2.1 Km. | 114480 | 2900 |
| | | **18) ಸೀಬಿ (Out side the cluster Village) S.No. 182, 194** | | | | |
| | | i) Preparing the site by dozing and uprooting existing growth, creation of intermittent bunds across the slope and using the debris as check-dams on depressions, using 220 HP. D-80 buldozers (including road and inspection path forming) | Energy Forest | 30 | 11100 | 300 |
| | | ii) 51600 ಆರ್.ಎಂ.ಟಿ.ಆರ್. ರಿಪ್ಪಿಂಗ್ ಮಾಡುವುದು (Ripping by 220 HP D-80 buldozer) | | 30 | 118680 | 3000 |
| | | iii) ಸಿಪಿಟಿ ತೆಗೆಯುವುದು | | 2.1 Km. | 114480 | 2900 |
| | | **IV) ತುಮಕೂರು ವಲಯ** | | | | |
| | | **19) ಹುಚ್ಚಬಸವನಹಳ್ಳಿ (Out side the cluster Village) S.No. 10, 20, 23** | | | | |
| | ಬೇರಿ | i) Preparing the site by dozing and uprooting existing growth, creation of intermittent bunds across the slope and using the debris as check-dams on depressions, using 220 HP. D-80 buldozers (including road and inspection path forming) | Energy Forest | 25 | 9250 | 250 |

| 1 | 2 | 3 | 4 | 5 | 6 | 7 |
|---|---|---|---|---|---|---|
| | ಬೇರಿ | ii) 43000 ಆರ್.ಎಂ.ಟಿ.ಆರ್. ರಿಪ್ಪಿಂಗ್ ಮಾಡುವುದು (Ripping by 220 HP D-80 buldozer) | | 25 | 98900 | 2500 |
| | | iii) ಸಿಪಿಟಿ ತೆಗೆಯುವುದು | | 1.75 Km. | 95400 | 2400 |
| | | **20) ಹುಚ್ಚಬಸವನಹಳ್ಳಿ (Out side the cluster Village) S.No. 28, 23, 30** | | | | |
| | | i) Preparing the site by dozing and uprooting existing growth, creation of intermittent bunds across the slope and using the debris as check-dams on depressions, using 220 HP. D-80 buldozers (including road and inspection path forming) | Energy Forest | 25 | 9250 | 250 |
| | | ii) 43000 ಆರ್.ಎಂ.ಟಿ.ಆರ್. ರಿಪ್ಪಿಂಗ್ ಮಾಡುವುದು (Ripping by 220 HP D-80 buldozer) | | 25 | 98900 | 2500 |
| | | iii) ಸಿಪಿಟಿ ತೆಗೆಯುವುದು | | 1.75 Km. | 95400 | 2400 |
| | | **V) ಮಧುಗಿರಿ ವಲಯ** | | | | |
| | | **21) ಎ.ಎಂ. ಕಾವಲ್** | | | | |
| | | i) ಪಿಟ್ಸ್ / ಗುಂಡಿ ತೆಗೆಯುವುದು | ANR | 50 ha. or 1250 pits | 21370 | 550 |
| | | ii) ಸಿಪಿಟಿ ತೆಗೆಯುವುದು | | 3.50 Km. | 190350 | 4800 |
| | | **22) ಮಾದೇನಹಳ್ಳಿ** | | | | |
| | | i) ಪಿಟ್ಸ್ / ಗುಂಡಿ ತೆಗೆಯುವುದು | ANR | 60 ha. or 1500 pits | 25640 | 650 |
| | | ii) ಸಿಪಿಟಿ ತೆಗೆಯುವುದು | | 4.20 Km. | 228420 | 5700 |
| | | **23) ಮುದ್ದಪ್ಪನಹಳ್ಳಿ** | | | | |
| | ಬೇರಿ | i) ಪಿಟ್ಸ್ / ಗುಂಡಿ ತೆಗೆಯುವುದು | ANR | 60 ha. or 1500 pits | 25640 | 650 |
| | | ii) ಸಿಪಿಟಿ ತೆಗೆಯುವುದು | | 4.20 Km. | 228420 | 5700 |
| | | **VI) ಶಿರಾ ವಲಯ** | | | | |
| | | **24) ತಿಪ್ಪನಹಳ್ಳಿ (Out side the cluster Village)** | | | | |
| | ಬೇರಿ | i) ಪಿಟ್ಸ್ / ಗುಂಡಿ ತೆಗೆಯುವುದು | ANR | 40 ha. or 1000 pits | 17100 | 400 |
| | | ii) ಸಿಪಿಟಿ ತೆಗೆಯುವುದು | | 2.80 Km. | 152300 | 3800 |
| | | **25) ಹಳೇಬಿಜ್ಜನಹಳ್ಳಿ (Out side the cluster Village)** | | | | |
| | | i) ಪಿಟ್ಸ್ / ಗುಂಡಿ ತೆಗೆಯುವುದು | ANR | 10 ha. or 250 pits | 4300 | 100 |
| | | ii) ಸಿಪಿಟಿ ತೆಗೆಯುವುದು | | 0.70 Km. | 38100 | 950 |
| | | **26) ಚಿಕ್ಕ ಸೀಬಿ (Out side the cluster Village)** | | | | |
| | | i) ಪಿಟ್ಸ್ / ಗುಂಡಿ ತೆಗೆಯುವುದು | ANR | 40 ha. or 1000 pits | 17100 | 400 |
| | | ii) ಸಿಪಿಟಿ ತೆಗೆಯುವುದು | | 2.80 Km. | 152300 | 3800 |
| | | | | | **5538430** | **138461** |

**ನಿಬಂಧನೆಗಳು**

1. ಟೆಂಡರ್ ಫಾರಂನ್ನು ಟೆಂಡರ್ ದಿನಾಂಕದಂದು ಅಪರಾಹ್ನ 1.00 ಗಂಟೆಯವರೆಗೆ ರೂ.200-00 ಮತ್ತು ತೆರಿಗೆ ಪಾವತಿ ಪಡೆಯಬಹುದಾಗಿದೆ. ಭರ್ತಿ ಮಾಡಿದ ಟೆಂಡರ್ ಫಾರಂನ್ನು ಸಂಬಂಧಪಟ್ಟ ವಲಯಕ್ಕೆಂದು ನಮೂದಿಸಿ ಈ ಕಛೇರಿಯಲ್ಲಿ ಇಟ್ಟಿರುವ ಮೊಹರಾದ ಪೆಟ್ಟಿಗೆಯಲ್ಲಿ ಮಧ್ಯಾಹ್ನ 3.00 ಗಂಟೆಯವರೆಗೆ ಹಾಕಬಹುದಾಗಿದೆ.
2. ಭರ್ತಿ ಮಾಡಿದ ಟೆಂಡರುಗಳನ್ನು ವಲಯವಾರು ಮತ್ತು ಕೆಲಸವಾರು ಸಲ್ಲಿಸಬೇಕು ಹಾಗೂ ದರವನ್ನು ನಮೂದಿಸುವಾಗ ಹಾಸನ ವೃತ್ತದ 2004-05ನೇ ಸಾಲಿಗೆ ಮಂಜೂರಾದ ಎಸ್.ಎಸ್.ಆರ್. ದರಕ್ಕೆ ಶೇಕಡವಾರು ಇಂತಿಷ್ಟು ಹೆಚ್ಚು ಸಮ ಅಥವಾ ಕಡಿಮೆ ಎಂದು ನಮೂದಿಸಬೇಕು.
3. ಸ್ವೀಕರಿಸಲಾದ ಟೆಂಡರುಗಳನ್ನು ಆಯಾ ದಿನಾಂಕಗಳಂದು ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರು ಅಥವಾ ಅವರಿಂದ ನೇಮಿಸಲ್ಪಟ್ಟವರಿಂದ ಅಪರಾಹ್ನ 4.00 ಗಂಟೆಗೆ ಹಾಜರಿರುವ ಅರಣ್ಯ ಗುತ್ತಿಗೆದಾರರ ಸಮ್ಮುಖದಲ್ಲಿ ತೆಗೆಯಲಾಗುವುದು.
4. ಈ ಕಾಮಗಾರಿಗಳು ಕಾಲಬದ್ಧ ಕೆಲಸಗಳಾಗಿದ್ದು ಅವುಗಳನ್ನು ಋತುಮಾನಕ್ಕೆ ಅನುಗುಣವಾಗಿ (ಕಾಲಬದ್ಧ) ಆಯಾ ವಲಯ ಅರಣ್ಯ ಅಧಿಕಾರಗಳ ನಿರ್ದೇಶನದ ಮೇಲೆ ಜಾರಿಗೊಳಿಸಲು ಬದ್ಧರಾಗಿರಬೇಕು. ಸದರಿ ಕೆಲಸಗಳು ಕಾಲಬದ್ಧವಾಗಿದ್ದು ಒಂದು ಪಕ್ಷ ಯಾವುದಾದರೂ ವಲಯದಲ್ಲಿ ಟೆಂಡರ್ ಮುಂಚೆ ಕೆಲಸಗಳನ್ನು ಕೈಗೊಂಡಿದ್ದ ಪಕ್ಷದಲ್ಲಿ ಅಂತಹ ಕೆಲಸಗಳು ಈ ಪ್ರಕಟಣೆಯಿಂದ ಹೊರತು ಪಡಿಸಿದವುಗಳಾಗಿರುತ್ತವೆ.
5. ಪ್ರತಿ ಟೆಂಡರ್‌ದಾರರು ಕಾಮಗಾರಿಗಳನ್ನು ನಿರ್ವಹಿಸಲು ಅಗತ್ಯವಿರುವ ಸಲಕರಣೆಗಳನ್ನು ಹಾಗೂ ಸಾಗಾಣಿಕೆ ವಾಹನಗಳನ್ನು ಸ್ವಂತವಾಗಿ ಮಾಡಿಕೊಳ್ಳಬೇಕು.

6. ಈ ಮೇಲಿನ ಕೆಲಸಗಳಿಗೆ ಟೆಂಡರ್ ಸಲ್ಲಿಸಲು ಇಚ್ಛಿಸುವವರು ಆಯಾ ಕೆಲಸಕ್ಕೆ ನಿಗದಿ ಪಡಿಸಿದ ಇಎಂಡಿ ಮೊತ್ತಕ್ಕೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ತುಮಕೂರು ವಿಭಾಗ, ತುಮಕೂರು ಇವರ ಹೆಸರಿಗೆ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದ ಡಿಡಿ ರೂಪದಲ್ಲಿ ಪಾವತಿಸಬೇಕು.
7. ಗುತ್ತಿಗೆದಾರರು ಸಲ್ಲಿಸುವ ಷರತ್ತುಗಳನ್ನೊಳಗೊಂಡ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
8. ಯಾವುದೇ ಕಾರಣ ನೀಡದೇ ಟೆಂಡರ್‌ಗಳನ್ನು ಒಪ್ಪುವ ಅಥವಾ ತಿರಸ್ಕರಿಸುವ ಹಕ್ಕು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ತುಮಕೂರು ವಿಭಾಗ, ತುಮಕೂರು ಇವರು ಕಾಯ್ದಿರಿಸಿಕೊಂಡಿದ್ದಾರೆ.
9. ಸರ್ಕಾರದಿಂದ ಅನುದಾನವು, ತುಮಕೂರು ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿಗೆ ತಲುಪಿದ ನಂತರವೇ ಪಾವತಿ ಮಾಡಲಾಗುವುದು.
10. ಈ ಮೇಲಿನ ಕಾಮಗಾರಿಗಳ ಹಣ ಪಾವತಿಸುವುದು ಆಯಾ ಯೋಜನೆಗಳಡಿ ಬಿಡುಗಡೆಗೊಳ್ಳುವ ಅನುದಾನ ಮತ್ತು ಅನುಮೋದನೆಯ ನಿಬಂಧನೆಗೆ ಒಳಪಟ್ಟಿರುತ್ತದೆ. ಒಂದು ಪಕ್ಷದಲ್ಲಿ ಸರ್ಕಾರದಿಂದ ಹಣ ಬಿಡುಗಡೆಯಾಗುವುದು ತಡವಾದ ಪಕ್ಷದಲ್ಲಿ ಅಂತಹ ಹಣ ಪಾವತಿಗೆ ಯಾವುದೇ ತರಹದ ಬಡ್ಡಿ ನೀಡಲಾಗುವುದಿಲ್ಲ.
11. ಈ ಅರಣ್ಯ ಕಾಮಗಾರಿಗಳು ಕಾಲಬದ್ಧ ಕಾಮಗಾರಿಗಳಾಗಿದ್ದು ಅವುಗಳನ್ನು ಕಾಲಮಿತಿ ಮತ್ತು ನಿಗದಿತ ಸಮಯಗಳಲ್ಲಿ ಕಾಮಗಾರಿಗಳನ್ನು ನಿರ್ವಹಿಸಲು ವಿಫಲರಾದಲ್ಲಿ ಅಂತಹ ಕಾಮಗಾರಿಗಳನ್ನೂ ಇಲಾಖೆ ಮೂಲಕ ನಿರ್ವಹಿಸಲಾಗುವುದು ಹಾಗೂ ಇಎಂಡಿ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಇಲಾಖಾ ಮೂಲಕ ನಿರ್ವಹಿಸಿದಲ್ಲಿ ಹೆಚ್ಚು ವೆಚ್ಚವಾದರೆ ಅದನ್ನು ಸಂಬಂಧಪಟ್ಟವರಿಂದ ವಸೂಲಿ ಮಾಡಲಾಗುವುದು.
12. ವಿಜೇತ ಟೆಂಡರ್‌ದಾರರು ಆದೇಶದ 7 ದಿನಗಳೊಳಗಾಗಿ ಕರಾರನ್ನು ಚಾಲ್ತಿ ದರ ಛಾಪಾ ಕಾಗದದ ಮೇಲೆ ತುಮಕೂರು ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಸಮಕ್ಷಮದಲ್ಲಿ ಮಾಡಿಕೊಳ್ಳತಕ್ಕದ್ದು.
13. ಕೆಲಸಗಳನ್ನು ಆಯಾಯ ಉಪವಿಭಾಗದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಯವರ ಪರಿಶೀಲನೆ ಹಾಗೂ ದೃಢೀಕರಣವನ್ನು ಅನುಸರಿಸಿ ಬಿಲ್ಲನ್ನು ಪಾವತಿ ಮಾಡಲಾಗುವುದು ಹಾಗೂ ಪಾವತಿಸುವ ಶೇ.2 ರಷ್ಟು ಹಣವನ್ನು ಆದಾಯ ತೆರಿಗೆ ಬಾಬ್ತು ಹಿಡಿಯಲಾಗುವುದು ಮತ್ತು 2.5 ರಷ್ಟು ಭದ್ರತಾ ಠೇವಣಿ ಹಿಡಿಯಲಾಗುವುದು. ಕಾಲಬದ್ಧ ಕೆಲಸಗಳ ಬಾಬ್ತು ಸರ್ಕಾರವು ನಿಗದಿಪಡಿಸಿದ ಇತರೆ ತೆರಿಗೆಗಳನ್ನು ಸಂಬಂಧಪಟ್ಟ ಬಿಲ್ಲುಗಳಲ್ಲಿ ಕಟಾಯಿಸಲಾಗುವುದು.
14. ಯಾವುದೇ ತಕರಾರಿನ ಬಗ್ಗೆ ತುಮಕೂರು ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಯವರಲ್ಲಿ ಮೇಲ್ಮನವಿ ಸಲ್ಲಿಸಬಹುದು. ಅವರ ಆದೇಶವು ಅಧೀನಾಧಿಕಾರಿಗಳಿಗೆ ಹಾಗೂ ಗುತ್ತಿಗೆದಾರರಿಗೆ ಪಾಲನಾರ್ಹವಾದುದು.
15. ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಆದೇಶದ ಬಗ್ಗೆ ತೃಪ್ತಿಯಿಲ್ಲವಾದರೆ ಹಾಸನ ವೃತ್ತದ ಅರಣ್ಯ ಸಂರಕ್ಷಣಾಧಿಕಾರಿಯವರಲ್ಲಿ ಮೇಲ್ಮನವಿ ಸಲ್ಲಿಸಬಹುದು ಹಾಗೂ ಅವರು ಕೊಡುವ ತೀರ್ಪು ಅಂತಿಮವಾದುದು.
16. ಕಾಮಗಾರಿ ಸ್ಥಳಗಳು ತಾತ್ಕಾಲಿಕವಾಗಿದ್ದು ಅವುಗಳ ಸ್ಥಳ ಬದಲಾವಣೆಗಳಾಗುವ ಸಂಭವವಿರುತ್ತದೆ. ಹೆಚ್ಚಿನ ಮಾಹಿತಿಗಾಗಿ ಕಛೇರಿ ವೇಳೆಯಲ್ಲಿ ಸಂಪರ್ಕಿಸಬಹುದು.
17. ಕೆಲಸದ ಪರಿಮಾಣ ಎನರ್ಜಿ ಫಾರೆಸ್ಟ್ ಮತ್ತು ಅಸಿಸ್ಟೆಂಟ್ ನ್ಯಾಚುರಲ್ ರೀಜನರೇಶನ್ ಕ್ರಮವಾಗಿ 150 ಮತ್ತು 50 ಹೆ. ನಷ್ಟು ಹೆಚ್ಚಿಸುವ ಸಾಧ್ಯತೆಯಿದ್ದು ಹೆಚ್ಚುವರಿಯಾದ ಕೆಲಸವನ್ನು ಸಹ ಒಪ್ಪಿಗೆಯಾದ ಟೆಂಡರ್‌ನ ದರದಲ್ಲಿ ಆಯಾ ವಲಯ ಅರಣ್ಯಾಧಿಕಾರಿಗಳು ಸೂಚಿಸುವ ಜಾಗದಲ್ಲಿಯೇ ಮಾಡತಕ್ಕದ್ದು.
18. ಕರ್ನಾಟಕ ಅರಣ್ಯ ಕಾಯ್ದೆ ಕರ್ನಾಟಕ ಅರಣ್ಯ ಸಂಹಿತೆ, ಕರ್ನಾಟಕ ಅರಣ್ಯ ಮ್ಯಾನ್ಯುಯಲ್ ಹಾಗೂ ಸರ್ಕಾರಿ ಅಧಿಸೂಚನೆ : ಆದೇಶಗಳು ಮತ್ತು ಕಾಲಕಾಲಕ್ಕೆ ಇಲಾಖೆಯಿಂದ ನೀಡಿದ ಸುತ್ತೋಲೆ ಮೇಲೆ ನಿರ್ದೇಶನ ಪ್ರಕಾರ ಅರಣ್ಯ ಗುತ್ತಿಗೆದಾರರು ಹಾಗೂ ಒಟ್ಟಾಗಿ ಕಾಮಗಾರಿಗಳನ್ನು ನಿರ್ವಹಿಸುವುದು.

ಪಿ.ಆರ್. 61 ಉಪ ಅರಣ್ಯ ಸಂರಕ್ಷಣಾಧಿಕಾರಿ, ತುಮಕೂರು ವಿಭಾಗ, ತುಮಕೂರು.

## ತೋಟಗಾರಿಕೆ ಇಲಾಖೆ

## ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರ ಕಛೇರಿ, (ರಾಜ್ಯ ವಲಯ) ಕೋಲಾರ

**ಸಂಖ್ಯೆ: ತೋಇ:ಹಿಸತೋನಿ:ರಾವ:ಕೋ:ಸತೋಅ:1:49:2004-05, ದಿನಾಂಕ: 15ನೇ ಜನವರಿ 2005**

## ಸಪೋಟ ಫಸಲಿನ ವಿಲೇವಾರಿಗೆ ಟೆಂಡರ್-ಕಂ-ಹರಾಜು ಪ್ರಕಟಣೆ

ಈ ಮೂಲಕ ಸಾರ್ವಜನಿಕರಿಗೆ ಹಾಗೂ ಆಸಕ್ತ ಹಣ್ಣು ವ್ಯಾಪಾರಸ್ಥರಿಗೆ ತಿಳಿಯಪಡಿಸುವುದೇನೆಂದರೆ ಈ ಕಛೇರಿ ವ್ಯಾಪ್ತಿಯಲ್ಲಿ ಬರುವ ಈ ಕೆಳಕಂಡ ತೋಟಗಾರಿಕೆ ಕ್ಷೇತ್ರ ಮತ್ತು ನರ್ಸರಿಗಳ ಫಸಲಿನ 2005ನೇ ಸಾಲಿನ ಮೊದಲನೇ ಅವಧಿಯ ಸಪೋಟ ಫಸಲಿನ ದಿನಾಂಕ: 1.1.2005 ರಿಂದ ದಿನಾಂಕ: 30.3.2005ರ ವರೆಗಿನ ವಿಲೇವಾರಿಯನ್ನು ಪರಿಷ್ಕೃತ ನಿಯಮಾವಳಿಗಳ ರೀತ್ಯಾ ಟೆಂಡರ್-ಕಂ-ಬಹಿರಂಗ ಹರಾಜಿನ ಮೂಲಕ ಆಯಾ ಕ್ಷೇತ್ರಗಳಲ್ಲಿ ವಿಲೇವಾರಿ ಮಾಡಲಾಗುವುದು. ಟೆಂಡರ್-ಕಂ-ಬಹಿರಂಗ ಹರಾಜನ್ನು ನಡೆಸುವ ದಿನಾಂಕ ಮತ್ತು ವೇಳೆಯನ್ನು ಈ ಕೆಳಕಂಡಂತೆ ನಿಗದಿಪಡಿಸಿದೆ.

| ಕ್ರ. ಸಂ. | ಕ್ಷೇತ್ರದ ಹೆಸರು | ಫಸಲಿನ ಹೆಸರು | ಮುಂಗಡ ಠೇವಣಿ ಮೊತ್ತ (ರೂ.ಗಳಲ್ಲಿ) | ಟೆಂಡರ್-ಕಂ-ಬಹಿರಂಗ ಹರಾಜು ನಡೆಸುವ ದಿನಾಂಕ ಮತ್ತು ವೇಳೆ |
|---|---|---|---|---|
| 1 | ಶಿಡ್ಲಘಟ್ಟ ಸಸ್ಯಾಗಾರ, ಶಿಡ್ಲಘಟ್ಟ ತಾಲ್ಲೂಕು | ಸಪೋಟ | 1000-00 | ದಿನಾಂಕ: 16.2.2005 ವೇಳೆ ಮಧ್ಯಾಹ್ನ 12.30 ಗಂಟೆಗೆ |
| 2 | ಜಿಲ್ಲಾ ಸಸ್ಯಾಗಾರ, ಕೋಲಾರ. | ಸಪೋಟ | 500-00 | ದಿನಾಂಕ: 18.2.2005 ವೇಳೆ ಮಧ್ಯಾಹ್ನ 12.30 ಗಂಟೆಗೆ |

ಈ ಮೇಲ್ಕಂಡ ಫಸಲುಗಳ ಬಗ್ಗೆ ಟೆಂಡರ್ ಸಲ್ಲಿಸಲು ಇಚ್ಛಿಸುವವರು ಟೆಂಡರ್ ಫಾರಂನ್ನು ರೂ.25.00 (ಇಪ್ಪತ್ತೈದು ರೂ.ಗಳು ಮಾತ್ರ) ಗಳನ್ನು ಪಾವತಿಸಿ, ಈ ಕೆಳಸಹಿದಾರರ ಕಛೇರಿಯಲ್ಲಿ ಕಛೇರಿ ವೇಳೆಯಲ್ಲಿ ಪಡೆಯಬಹುದಾಗಿರುತ್ತದೆ. (ರಜಾದಿನಗಳನ್ನು ಹೊರತುಪಡಿಸಿ) ಟೆಂಡರ್ ಫಾರಂ ಸಲ್ಲಿಸುವವರು ಠೇವಣಿ ಮೊತ್ತ ಮತ್ತು ಫಸಲಿಗೆ ತಾವು ನಮೂದಿಸಿದ ಮೊತ್ತದ ಶೇಕಡ 50 ಭಾಗದ ಮೊತ್ತವನ್ನು ಅಡ್ಡಗೆರೆ ಎಳೆದ ಡಿ.ಡಿ. ರೂಪದಲ್ಲಿ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, (ರಾಜ್ಯವಲಯ) ಕೋಲಾರ ರವರ ಹೆಸರಿಗೆ ಪಡೆದು ಮೊಹರಾದ ಟೆಂಡರ್ ಜೊತೆಯಲ್ಲಿ ಕಡ್ಡಾಯವಾಗಿ ಲಗತ್ತಿಸಬೇಕು.

ಬಹಿರಂಗ ಹರಾಜಿನಲ್ಲಿ ಭಾಗವಹಿಸುವವರು ಠೇವಣಿ ಹಣವನ್ನು ಸಂದಾಯ ಮಾಡಿ, ಬಹಿರಂಗ ಹರಾಜಿನಲ್ಲಿ ಭಾಗವಹಿಸಬಹುದು. ಟೆಂಡರ್ ಸಲ್ಲಿಸುವವರು ಭರ್ತಿ ಮಾಡಿದ ಮೊಹರಾದ ಟೆಂಡರ್ ಫಾರಂಗಳನ್ನು ಹರಾಜು ನಡೆಯುವ ಮುನ್ನ ಆಯಾ ಕ್ಷೇತ್ರಗಳಲ್ಲಿ ಸಲ್ಲಿಸಬೇಕು.

ಬಹಿರಂಗ ಹರಾಜಿನಲ್ಲಿ ಬಿಡ್ ಮಾಡಿದ ಯಶಸ್ವಿ ಬಿಡ್‌ದಾರರು ಹರಾಜಿನ ಮೊತ್ತದ ಶೇಕಡ 50ರ ಭಾಗದ ಮೊತ್ತವನ್ನು ಸ್ಥಳದಲ್ಲಿಯೇ ಪಾವತಿಸುವುದು. ಫಸಲಿನ ಟೆಂಡರ್-ಯಾ-ಬಹಿರಂಗ ಹರಾಜಿನಲ್ಲಿ ಬಂದ ಅತಿ ಹೆಚ್ಚು ಬಿಡ್ಡು ಮೊತ್ತವನ್ನು ಅಂತಿಮ ಬಿಡ್ ಮೊತ್ತವೆಂದು ಪರಿಗಣಿಸಲಾಗುವುದು.

ಮೇಲಿನ ಕ್ಷೇತ್ರಗಳ ಫಸಲುಗಳ ಟೆಂಡರ್-ಯಾ-ಬಹಿರಂಗ ಹರಾಜು ಅನುಮೋದನೆಯಾದ ದಿನಾಂಕದಿಂದ 10 ದಿನಗಳೊಳಗಾಗಿ ಪೂರ್ಣ ಮೊತ್ತವನ್ನು ಪಾವತಿಸಿ, ಫಸಲನ್ನು ರೂಢಿಸಿಕೊಳ್ಳಬಹುದಾಗಿರುತ್ತದೆ. ಸದರಿ ಟೆಂಡರ್-ಯಾ-ಬಹಿರಂಗ ಹರಾಜು ಪ್ರಕ್ರಿಯೆಯನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ತೋಟಗಾರಿಕೆ ನಿರ್ದೇಶಕರು ಪಡೆದಿರುತ್ತಾರೆ. ಹರಾಜು ನಡೆಸುವ ಪ್ರಕ್ರಿಯೆಯು ಇಲಾಖಾ ಅಧಿಕಾರಿಗಳ ಅಧಿಕಾರ ವ್ಯಾಪ್ತಿಗೆ ಒಳಪಟ್ಟಿರುತ್ತದೆ. ಹೆಚ್ಚಿನ ಪರಿಷ್ಕೃತ ನಿಯಮಾವಳಿಗಳ ವಿವರ, ನಿಬಂಧನೆ ಷರತ್ತುಗಳನ್ನು ಈ ಕೆಳಸಹಿದಾರರ ಕಛೇರಿಯಲ್ಲಿ ಅಥವಾ ಸಂಬಂಧಪಟ್ಟ ಕ್ಷೇತ್ರಗಳ ಅಧಿಕಾರಿಗಳಲ್ಲಿ, ಕಛೇರಿ ವೇಳೆಯಲ್ಲಿ ಪಡೆಯಬಹುದು. ಯಶಸ್ವಿ ಬಿಡ್ಡುದಾರರು ಒಟ್ಟು ಫಸಲಿನ ಶೇಕಡ 5 ರಷ್ಟು ಭಾಗವನ್ನು ಇಲಾಖೆಯು ನಿಗದಿಪಡಿಸಿದ ದರದಲ್ಲಿ ಸ್ಥಳೀಯವಾಗಿ ಮಾರಾಟ ಮಾಡಲು ಸಿದ್ಧರಿರಬೇಕು.

ಪಿ.ಆರ್. 58 ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, (ರಾಜ್ಯವಲಯ) ಕೋಲಾರ.

**ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಮಾಜಿಕ ಅರಣ್ಯ (ಸಂಶೋಧನೆ),**
**1ನೇ ತಿರುವು, ಅರಕೆರೆ ಮೈಕೊ ಬಡಾವಣೆ, ಬನ್ನೇರುಘಟ್ಟ ರಸ್ತೆ, ದೊರೆಸಾನಿಪಾಳ್ಯ, ಬೆಂಗಳೂರು-76**
**ಅರಣ್ಯ ಇಲಾಖೆಗೆ ಯಂತ್ರೋಪಕರಣ ಸರಬರಾಜು ಮಾಡಲು ಟೆಂಡರ್ ಪ್ರಕಟಣೆ**
**ಸಂಖ್ಯೆ: ಬಿಯುಡಿ:ಸಿಆರ್:4:2004-05, ದಿನಾಂಕ: 27ನೇ ಜನವರಿ 2005**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ 2004-2005ನೇ ಸಾಲಿನಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಮಾಜಿಕ ಅರಣ್ಯ (ಸಂಶೋಧನೆ), ಬೆಂಗಳೂರಿನ ಬೀಜಾಭಿವೃದ್ಧಿ ಘಟಕಕ್ಕೆ ನೋಂದಾಯಿಸಿದ ಸಂಗ್ರಹಣಾ ಸಂಸ್ಥೆಗಳಿಂದ ಪ್ರತಿಯೊಂದು ಸರಬರಾಜಿಗೆ ಪ್ರತ್ಯೇಕ ಟೆಂಡರ್ ಕರೆಯಲಾಗಿದೆ.

ದಿನಾಂಕ: 14.02.2005 ರಂದು ಸಂಜೆ 4.00 ಗಂಟೆಯೊಳಗೆ ಮೊಹರು ಮಾಡಿದ ಟೆಂಡರ್ ಸಲ್ಲಿಸುವುದು ಅದೇ ದಿನ ಕೆಳಗೆ ಸಹಿ ಮಾಡಿದವರು ಅಥವಾ ಇವರಿಂದ ಅಧಿಕೃತವಾಗಿ ನೇಮಿಸಲ್ಪಟ್ಟವರು ಟೆಂಡರ್‌ದಾರರ ಸಮ್ಮುಖದಲ್ಲಿ ಟೆಂಡರ್ ಲಕೋಟೆಯನ್ನು ತೆರೆಯುವರು. ಒಂದೊಮ್ಮೆ ಆ ದಿನದಂದು ಟೆಂಡರ್‌ನ್ನು ಯಾರೂ ಸಲ್ಲಿಸದಿದ್ದಲ್ಲಿ ದಿನಾಂಕ: 21.02.2005 ರಂದು 4.00 ಗಂಟೆಗೆ ಮರು ಟೆಂಡರ್ ಸಲ್ಲಿಸಬಹುದಾಗಿದೆ. ಈ ಕುರಿತು ಮತ್ತೆ ಪ್ರತ್ಯೇಕ ಟೆಂಡರ್ ಪ್ರಕಟಣೆಯನ್ನು ಹೊರಡಿಸುವುದಿಲ್ಲ. ಹೆಚ್ಚಿನ ವಿವರಗಳನ್ನು ಈ ಕಛೇರಿ ವೇಳೆಯಲ್ಲಿ ಪಡೆಯಬಹುದಾಗಿದೆ.

**ಷೆಡ್ಯೂಲ್**

| ಕ್ರ. ಸಂ. | ವಲಯ | ಕಾಮಗಾರಿಗಳ ವಿವರ | ಭೌತಿಕ ಪರಿಮಾಣ ಸಂಖ್ಯೆ | ಅಂದಾಜು ಮೊತ್ತ ರೂ. ಲಕ್ಷಗಳಲ್ಲಿ | ನಿಗದಿಪಡಿಸಿದ ಇಎಂಡಿ ಮೊತ್ತ | ಸರಬರಾಜು ಪೂರ್ಣಗೊಳಿಸ ಬೇಕಾದ ದಿನಾಂಕ |
|---|---|---|---|---|---|---|
| 1 | 1. ಮೈಸೂರು | ಪ್ಯಾಕಿಂಗ್ ಮೆಷಿನ್ ಯುನಿಟ್ | 1 | 1.998 | 5000.00 | From the date of agreement supply should be made with in 45 days or 31.3.2005 whichever is earlier. |
| | 2. ಧಾರವಾಡ | ಪ್ಯಾಕಿಂಗ್ ಮೆಷಿನ್ ಯುನಿಟ್ | 1 | 1.998 | 5000.00 | |
| | 3. ಶಿವಮೊಗ್ಗ | ಪ್ಯಾಕಿಂಗ್ ಮೆಷಿನ್ ಯುನಿಟ್ | 1 | 1.998 | 5000.00 | |

**ನಿಬಂಧನೆಗಳು**

1. ಟೆಂಡರ್ ಫಾರಂಗಳನ್ನು ಪ್ರತಿ ಫಾರಂಗೆ ರೂ.200 (ತೆರಿಗೆ ಸೇರಿ) ರಂತೆ ಪಾವತಿ ಮಾಡಿ ದಿನಾಂಕ: 14.02.2005 ರಂದು ಕಛೇರಿ ಕೆಲಸದ ವೇಳೆಯಲ್ಲಿ ಅಪರಾಹ್ನ 1.00 ಗಂಟೆಯವರೆಗೆ ಪಡೆಯಬಹುದು ಮತ್ತು ಟೆಂಡರ್‌ನಲ್ಲಿ ಭಾಗವಹಿಸಲು ಇಚ್ಛೆಯುಳ್ಳವರು ಬ್ಲಾಕ್ ಲಿಸ್ಟ್‌ನಲ್ಲಿರುವವರು, ಸಾಲ ತೀರಿಸಲಾಗದವರು, ನ್ಯಾಯಾಲಯಗಳಿಂದ ದೋಷಿಗಳು ಎಂದು ಘೋಷಿಸಲ್ಪಟ್ಟವರು, ಬುದ್ಧಿ ಸ್ಥಿಮಿತರಿಲ್ಲದವರನ್ನು ಗುತ್ತಿಗೆದಾರರಾಗಿ ನೋಂದಾಯಿಸಿಕೊಳ್ಳಲಾಗುವುದಿಲ್ಲ ಮತ್ತು ಅಂತಹವರ ಟೆಂಡರನ್ನು ಯಾವುದೇ ಕಾರಣ ಕೊಡದೇ ತಿರಸ್ಕರಿಸಲಾಗುವುದು. ಯಾವುದೇ ಷರತ್ತು ಹಾಕಿದ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದಿಲ್ಲ.
2. ಪ್ರತಿಯೊಂದು ಯೂನಿಟ್‌ಗೆ ಟೆಂಡರ್‌ಗಳನ್ನು ಪ್ರತ್ಯೇಕವಾಗಿ ಸಲ್ಲಿಸಬೇಕು.
3. ದರವನ್ನು ಅಂಕಿಗಳಲ್ಲಿ ಮತ್ತು ಅಕ್ಷರಗಳಲ್ಲಿ ಸ್ಪಷ್ಟವಾಗಿ ನಮೂದಿಸಿರಬೇಕು. ಇವೆರಡರಲ್ಲಿ ವ್ಯತ್ಯಾಸ ಬಂದಲ್ಲಿ ಯಾವುದು ಕಡಿಮೆಯೋ ಆ ದರಗಳನ್ನು ಪರಿಗಣಿಸಲಾಗುವುದು. ಟೆಂಡರ್ ಫಾರಂನಲ್ಲಿ ಎಲ್ಲಾ ಕಾಲಂಗಳನ್ನು ತುಂಬಿ ಸಹಿ ಮಾಡಿರಬೇಕು. ತಿದ್ದುಪಡಿಗಳನ್ನು ಪೂರ್ಣ ಸಹಿಯ ಮೂಲಕ ದೃಢೀಕರಿಸಬೇಕು.
4. ಪ್ರತಿಯೊಂದು ಟೆಂಡರ್‌ಗೆ ಪ್ರತ್ಯೇಕವಾಗಿ ಸಂಚಕಾರ ಠೇವಣಿ (ಇ.ಎಂ.ಡಿ.) ಯನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಮಾಜಿಕ ಅರಣ್ಯ (ಸಂಶೋಧನೆ), ಬೆಂಗಳೂರು ಇವರ ಹೆಸರಿನಲ್ಲಿ ರಾಷ್ಟ್ರೀಕೃತ ಬ್ಯಾಂಕಿನಿಂದ ಡಿ.ಡಿ. ತೆಗೆದು ಲಗತ್ತಿಸಿರಬೇಕು. ಸಂಚಕಾರ ಠೇವಣಿಗೆ ಬಡ್ಡಿ ನೀಡಲಾಗುವುದಿಲ್ಲ.

5. ಟೆಂಡರ್ ಫಾರಂಗಳನ್ನು ಮೊಹರು ಮಾಡಿದ ಲಕೋಟೆಯಲ್ಲಿಟ್ಟು, ಲಕೋಟೆಯ ಮೇಲ್ಭಾಗದಲ್ಲಿ "ಪ್ಯಾಕಿಂಗ್ ಯಂತ್ರಗಳ ಸರಬರಾಜಿಗಾಗಿ" ಎಂದು ಸ್ಪಷ್ಟವಾಗಿ ನಮೂದಿಸಿ, ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಸಾಮಾಜಿಕ ಅರಣ್ಯ (ಸಂಶೋಧನೆ), ಬೆಂಗಳೂರುರವರ ಹೆಸರಿಗೆ ವಿಳಾಸಿಸಿ ಇದನ್ನು ನಿಗದಿತ ಪೆಟ್ಟಿಗೆಯಲ್ಲಿ ದಿನಾಂಕ: ರಂದು ಮಧ್ಯಾಹ್ನ ಗಂಟೆಯೊಳಗೆ ಹಾಕಬೇಕು.
6. ಟೆಂಡರ್‌ಗಳನ್ನು ಅದೇ ದಿನ 4.00 ಗಂಟೆಗೆ ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿಯೆ ತೆರೆದು ವಿವಿಧ ಟೆಂಡರ್‌ದಾರರು ಯುನಿಟ್‌ವಾರು ಪ್ರಸ್ತಾಪಿಸಿದ ದರವನ್ನು ಬಹಿರಂಗಪಡಿಸಲಾಗುವುದು.
7. ಬಂದ ದರಗಳಲ್ಲಿ ಅತೀ ಕಡಿಮೆ ದರವನ್ನು ಸಾಮಾನ್ಯವಾಗಿ ಅಂಗೀಕರಿಸಲಾಗುವುದು. ಒಂದೇ ದರವನ್ನು ಪ್ರಸ್ತಾಪಿಸಿ, ಒಂದಕ್ಕಿಂತ ಹೆಚ್ಚಿನ ಟೆಂಡರ್ ಬಂದಲ್ಲಿ ಅವುಗಳನ್ನು ಸಂಬಂಧಿಸಿದ ಟೆಂಡರ್‌ದಾರರ ಅಂಗೀಕಾರದೊಂದಿಗೆ ಸೂಕ್ತ ರೀತಿಯಲ್ಲಿ ಪರಸ್ಪರ ಒಪ್ಪಂದ (ನೆಗೋಷಿಯೇಷನ್) ಮೂಲಕ ಅಂದರೆ ಅತೀ ಕಡಿಮೆ ಬೆಲೆ ಕೊಡುವ ಆಧಾರದ ಮೇಲೆ ವಿಲೇವಾರಿ ಮಾಡಲಾಗುವುದು. ಈ ವಿಷಯದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ನಿರ್ಧಾರ ಅಂತಿಮವಾಗಿರುತ್ತದೆ.
8. ಅಸಫಲರಾದ ಟೆಂಡರ್‌ದಾರರ (2ನೇ ಕನಿಷ್ಟದರ ಪ್ರಸ್ತಾಪಿಸಿದವರನ್ನು ಹೊರತುಪಡಿಸಿ) ಸಂಚಕಾರ ಠೇವಣಿಯನ್ನು ಅಂದೇ ಅವರ ಅರ್ಜಿಯ ಮೇಲೆ ಹಿಂದಿರುಗಿಸಲಾಗುವುದು. ಇನ್ನುಳಿದ ಇ.ಎಂ.ಡಿ. ಗಳನ್ನು ಮುಂದೆ ಭದ್ರತಾ ಠೇವಣಿಯಾಗಿ ಮಾರ್ಪಡಿಸಲಾಗುವುದು. ಮೊದಲನೆಯದಾಗಿ ಸಫಲರಾದ ಟೆಂಡರ್‌ದಾರರ ಕರಾರು ಪತ್ರವನ್ನು ಮಾಡಿಕೊಂಡ ನಂತರ 2ನೆಯ ಕನಿಷ್ಟ ದರದ ಟೆಂಡರ್‌ದಾರರ ಸಂಚಕಾರ ಠೇವಣಿಯನ್ನು ಹಿಂದಿರುಗಿಸಲಾಗುವುದು.
9. ಟೆಂಡರ್ ಫಲಿತಾಂಶವನ್ನು ಟೆಂಡರ್ ನಡೆಸಿದ ದಿನಾಂಕದಿಂದ 15 ದಿನದೊಳಗೆ ಲಿಖಿತ ರೂಪದಲ್ಲಿ ತಿಳಿಸಲಾಗುವುದು. ತಿಳಿಸಿದ 7 ದಿನದೊಳಗೆ ಸಫಲರಾದ ಟೆಂಡರ್‌ದಾರರು ನಿಗದಿತ ಮೌಲ್ಯದ ಸ್ಟಾಂಪ್ ಪೇಪರ್‌ನಲ್ಲಿ ಕರಾರು ಪತ್ರವನ್ನು ಮಾಡಿಕೊಳ್ಳಬೇಕು. ಇಲ್ಲದಿದ್ದಲ್ಲಿ ಅವರು ಅನಾಸಕ್ತರೆಂದು ತಿಳಿದು ಅವರ ಗುತ್ತಿಗೆಯನ್ನು ಯಾವುದೇ ಕಾರಣ ನೀಡದೇ ರದ್ದುಮಾಡಲಾಗುವುದು.
10. ಮೊದಲನೇ ಟೆಂಡರ್‌ದಾರರು ಸಫಲರಾಗಿದ್ದು, ನಿಗದಿತ ಅವಧಿಯಲ್ಲಿ ಕರಾರು ಮಾಡಿಕೊಳ್ಳತಕ್ಕದ್ದು ತಪ್ಪಿದಲ್ಲಿ 2ನೇ ಅತೀ ಕಡಿಮೆ ದರದ ಟೆಂಡರ್‌ದಾರರು ಕರಾರು ಮಾಡಿಕೊಂಡು ಕಾರ್ಯಾರಂಭ ಮಾಡಲು ಅರ್ಹರಾಗಿರುತ್ತಾರೆ. ಕರಾರು ಮಾಡಿಕೊಂಡ ನಂತರ ಇವರ ಇ.ಎಂ.ಡಿ. ಯನ್ನು ಭದ್ರತಾ ಠೇವಣಿಯಾಗಿ ಮಾರ್ಪಾಡು ಮಾಡಿಕೊಳ್ಳಲಾಗುವುದು ಹಾಗೂ ಮೊದಲನೇ ಟೆಂಡರ್‌ದಾರರ ಗುತ್ತಿಗೆಯನ್ನು ವಜಾ ಮಾಡಲಾಗುವುದು. ಮತ್ತು ಇಎಂಡಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
11. ಯಾವುದೇ ಕಾರಣಕ್ಕೂ ಗುತ್ತಿಗೆ ವರ್ಗಾವಣೆಯನ್ನು ನಿಷೇಧಿಸಿದೆ.
12. ಗುತ್ತಿಗೆಯ ಪೂರ್ಣ ಪ್ರಮಾಣದ ಪ್ಯಾಕಿಂಗ್ ಯಂತ್ರಗಳ ತಯಾರಿಸಿದ ಕರಾರು ಪತ್ರ ಸಹಿ ಮಾಡಿದ ದಿನದಿಂದ 45 ದಿನದೊಳಗೆ ಅಥವಾ ದಿನಾಂಕ: 31.3.2005ರ ಮೊದಲು, ಇದರಲ್ಲಿ ಯಾವುದು ಮೊದಲೊ ಅದರಂತೆ ಸಾಮಗ್ರಿಗಳನ್ನು ಸರಬರಾಜು ಮಾಡತಕ್ಕದ್ದು ಇದಕ್ಕೆ ಸಮಯದ ವಿಸ್ತರಣೆ ಇರುವುದಿಲ್ಲ.
13. ಒದಗಿಸಿದ ಪ್ಯಾಕಿಂಗ್ ಯಂತ್ರಗಳ ಗುಣಮಟ್ಟವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ಅಥವಾ ಅವರಿಂದ ನೇಮಿಸಲ್ಪಟ್ಟವರು ಪರೀಕ್ಷಿಸುವರು. ಗುಣಮಟ್ಟ ಅಥವಾ ಗಾತ್ರದಲ್ಲಿ ವ್ಯತ್ಯಾಸವಿದ್ದಲ್ಲಿ, ಪೂರ್ತಿ ಮಾಲನ್ನು ತಿರಸ್ಕರಿಸಲಾಗುವುದು. ಇದಕ್ಕೆ ಯಾವುದೇ ಪರಿಹಾರವನ್ನು ಕೊಡಲಾಗುವುದಿಲ್ಲ. ಒಪ್ಪಿಕೊಂಡ ಪ್ರಮಾಣಕ್ಕೆ ಬಿಲ್ಲುಗಳನ್ನು ಪರೀಕ್ಷಾಧಿಕಾರಿಗಳು ದೃಢೀಕರಿಸಿದ ನಂತರ ಹಣ ಪಾವತಿಸಲು ಕ್ರಮ ಕೈಗೊಳ್ಳಲಾಗುವುದು.
14. ಕೇಂದ್ರ ಸರ್ಕಾರದಿಂದ ಸಿಎಸ್‌ಎಸ್ ಯೋಜನೆಯಡಿ ಪ್ಯಾಕಿಂಗ್ ಯಂತ್ರ ಸರಬರಾಜು ಕುರಿತಂತೆ ಕೇಂದ್ರ ಸರ್ಕಾರದಿಂದ 2004-05ನೇ ಸಾಲಿಗೆ ಪುನರ್ ಮೌಲ್ಯಗೊಳಿಸಿ ಬಿಡುಗಡೆಗೊಳಿಸಲಾಗುವ ಅನುದಾನದ ಷರತ್ತಿಗೊಳಪಟ್ಟಿರುತ್ತದೆ.
15. ಗುತ್ತಿಗೆದಾರರು ದೃಢೀಕೃತ ಬಿಲ್ಲುಗಳನ್ನು ಹಣ ಪಾವತಿಗಾಗಿ ಸಂಬಂಧಿಸಿದ ಉಪ ಅರಣ್ಯ ಸಂರಕ್ಷಣಾಧಿಕಾರಿಯವರಿಗೆ ಸಲ್ಲಿಸಬೇಕು. ಅದನ್ನು ಸರ್ಕಾರದಿಂದ ಬಿಡುಗಡೆಯಾಗುವ ಅನುದಾನದ ಲಭ್ಯತೆಗೊಳಪಟ್ಟು ಪಾವತಿಸಲಾಗುವುದು. ಒಂದು ಪಕ್ಷ ಸರ್ಕಾರದಿಂದ ಹಣ ಬಿಡುಗಡೆ ತಡವಾದ ಪಕ್ಷದಲ್ಲಿ ಅಂತಹ ಹಣ ಪಾವತಿಗಾಗಿ ಯಾವುದೇ ತರಹದ ಬಡ್ಡಿ ನೀಡುವುದಿಲ್ಲ. ಬಿಲ್ಲಿನ ನಿಯಮಾನುಸಾರ ಹಣದಲ್ಲಿ ಅನ್ವಯವಾಗುವಂತಹ ಮಾರಾಟ ತೆರಿಗೆ, ಆದಾಯ ತೆರಿಗೆ ಮತ್ತು ಇತರೆ ತೆರಿಗೆಗಳನ್ನು ಮುರಿದುಕೊಳ್ಳಲಾಗುವುದು. ವಹಿಸಿದ ಕೆಲಸಕ್ಕೆ ಯಾವುದೇ ಕಾರಣಕ್ಕೂ ಮುಂಗಡ ಹಣ ನೀಡಲಾಗುವುದಿಲ್ಲ ಹಾಗೂ ಬಾಕಿ ಬಿಲ್ಲುಗಳ ಮೇಲೆ ಬಡ್ಡಿ ಕೊಡುವುದಿಲ್ಲ.
16. ಗುಣಮಟ್ಟ ಮತ್ತು ಪರಿಮಾಣವನ್ನು ಒಪ್ಪಿಕೊಳ್ಳುವುದು ಅಥವಾ ತಿರಸ್ಕರಿಸುವುದು ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ವಿಚಕ್ಷಣೆಗೆ ಒಳಪಟ್ಟಿರುತ್ತದೆ.
17. ಯಾವುದೇ ಕರಾರು ನಿಯಮಗಳನ್ನು ಉಲ್ಲಂಘಿಸಿದಲ್ಲಿ ಅವರ ಗುತ್ತಿಗೆಯನ್ನು ರದ್ದು ಮಾಡುವುದು ಸಂಬಂಧಿಸಿದ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ವಿಚಕ್ಷಣೆಗೆ ಒಳಪಟ್ಟಿರುತ್ತದೆ. ಮತ್ತು ಅವರ ಜವಾಬ್ದಾರಿ ಮೇಲೆ ಗುತ್ತಿಗೆಯನ್ನು ಇನ್ನೊಬ್ಬರಿಗೆ ವಹಿಸಬಹುದಾಗಿದೆ. ಇದರಿಂದ ಸರ್ಕಾರಕ್ಕೆ ಸಂಭವಿಸಬಹುದಾದ ನಷ್ಟವನ್ನು ಅವರ ಭದ್ರತಾ ಠೇವಣಿಯನ್ನು ಮುಟ್ಟುಗೋಲು ಮಾಡಿಕೊಳ್ಳುವುದರ ಮೂಲಕ ಅಥವಾ ಇನ್ಯಾವುದೇ ರೀತಿಯಲ್ಲಿ ನಿಯಮದ ಮೂಲಕ ವಸೂಲು ಮಾಡಲಾಗುವುದು.
18. ಯಾವುದೇ ವಿಷಯದಲ್ಲಿ ತಕರಾರು ಬಂದಲ್ಲಿ ಮೇಲ್ಮನವಿಗಳನ್ನು ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಶೋಧನೆ ಮತ್ತು ಬಳಕೆ ವೃತ್ತ ಬೆಂಗಳೂರುರವರಿಗೆ ಸಲ್ಲಿಸಬಹುದು. ಇದರ ಬಗ್ಗೆ ಅಂತಿಮ ನಿರ್ಧಾರ ಅರಣ್ಯ ಸಂರಕ್ಷಣಾಧಿಕಾರಿಗಳವರದೇ ಆಗಿರುತ್ತದೆ.
19. ಟೆಂಡರ್ ಕಂಪನಿಯ ವತಿಯಿಂದ ಕೊಡುವ ಪಕ್ಷದಲ್ಲಿ

    ಅ. ಕಂಪನಿಯು ನಿಯಮಿತ ಅಥವಾ ನೋಂದಾಯಿತ ಕಂಪನಿಯಾಗಿರಬೇಕು.

    ಆ. ಕಂಪನಿಯು ಎಲ್ಲಾ ಪಾಲುದಾರರಿಗೆ ಟೆಂಡರ್‌ನ್ನು ಸಹಿ ಮಾಡಲು ಸಾಧ್ಯವಾಗದಿದ್ದಲ್ಲಿ, ಟೆಂಡರ್ ಸಹಿ ಮಾಡುವ ವ್ಯಕ್ತಿಯು ಈ ಬಗ್ಗೆ ಅಧಿಕಾರ ಪತ್ರ (Power of Attorney) ಪಡೆದುಕೊಂಡವನಾಗಿರಬೇಕು. ಇಂತಹ ಪತ್ರವನ್ನು ಟೆಂಡರ್‌ಗೆ ಲಗತ್ತಿಸಬೇಕು.
20. ಯಶಸ್ವಿ ಟೆಂಡರ್‌ದಾರರು ಕರಾರು ನಾಮೆಯನ್ನು ಮಾಡಿಕೊಂಡ ನಂತರ ಟೆಂಡರ್‌ನ್ನು ಹಿಂತೆಗೆದುಕೊಂಡಲ್ಲಿ ನಿಗದಿತ ಸಮಯದಲ್ಲಿ ಸರಬರಾಜು ಪ್ರಾರಂಭಿಸದಿದ್ದಲ್ಲಿ, ಸರಬರಾಜಿನ ಬಗ್ಗೆ ನಿರಾಸಕ್ತಿ ಹೊಂದಿದ್ದಲ್ಲಿ ಅಂತಹ ಟೆಂಡರ್‌ದಾರರ ಇಎಂಡಿ ಮತ್ತು ಭದ್ರತಾ ಠೇವಣಿಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಲ್ಲದೇ ಗುತ್ತಿಗೆ ಕೆಲಸವನ್ನು ಮೂಲ ಗುತ್ತಿಗೆದಾರರ ಖರ್ಚು ಮತ್ತು ಜವಾಬ್ದಾರಿಯ

ಮೇಲೆ ಮರು ಟೆಂಡರ್ ಮಾಡಲಾಗುವುದು. ಇಂತಹ ಮರು ಟೆಂಡರ್‌ನಲ್ಲಿ ಸರ್ಕಾರಕ್ಕೆ ಹಾನಿಯಾದ ಪಕ್ಷದಲ್ಲಿ ಇಂತಹ ಹಾನಿಯ ಮೊತ್ತವನ್ನು ಕರ್ನಾಟಕ ಸಂಹಿತೆ 1963ರ ಕಾಲಂ 109 ಮತ್ತು 119 ರಂತೆ ಭೂಕಂದಾಯ ಬಾಕಿ ವಸೂಲಿಯಂತೆ ವಸೂಲು ಮಾಡಲಾಗುವುದು.

21. ಸರಬರಾಜು ಪೂರ್ಣಗೊಂಡ ದಿನಾಂಕದಿಂದ 1 ವರ್ಷದ ಒಳಗಾಗಿ ಸರಬರಾಜಿನಲ್ಲಿ ಯಾವುದೇ ದೋಷ ಕಂಡುಬಂದಲ್ಲಿ ಗುತ್ತಿಗೆದಾರರು ತಮ್ಮ ಸ್ವಂತ ಖರ್ಚಿನಲ್ಲಿ ದೋಷ ಪರಿಹರಿಸಬೇಕಾಗುವುದು. ನಂತರ ಭದ್ರತಾ ಠೇವಣಿ ಹಿಂತಿರುಗಿಸಲಾಗುವುದು ಅಥವಾ ದೋಷ ಸರಿಪಡಿಸದಿದ್ದಲ್ಲಿ ಭದ್ರತಾ ಠೇವಣಿಯಲ್ಲಿ ಸದರಿ ಖರ್ಚನ್ನು ಭರಿಸಲಾಗುವುದು.
22. ಟೆಂಡರ್ ಪ್ರಕಟಣೆಯಲ್ಲಿ ಸರಬರಾಜು ಮಾಡಬೇಕಾದ ಪರಿಮಾಣವನ್ನು ನಮೂದಿಸಿದ್ದರೂ, ಇದರಲ್ಲಿ ಹೆಚ್ಚು ಅಥವಾ ಕಡಿಮೆಯನ್ನು ಮಾಡುವ ಅಧಿಕಾರವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ಹೊಂದಿರುತ್ತಾರೆ.
23. ಸರಬರಾಜಿನಲ್ಲಿ ತಾಂತ್ರಿಕ ವಿವರಗಳು ಮತ್ತು ಹೆಚ್ಚಿನ ನಿಬಂಧನೆಗಳನ್ನು ಈ ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ತಿಳಿದುಕೊಳ್ಳಬಹುದಾಗಿದೆ.
24. ಪ್ರತಿ ಟೆಂಡರ್‌ದಾರರು ಮೇಲಿನ ಸರಬರಾಜನ್ನು ನಿರ್ವಹಿಸಲು ಅಗತ್ಯವಿರುವ ಸಲಕರಣೆಗಳನ್ನು ಹಾಗೂ ಸಾಗಾಣಿಕೆ ವ್ಯವಸ್ಥೆಯನ್ನು ಅವರೇ ಮಾಡಿಕೊಳ್ಳಬೇಕು.

ಪಿ.ಆರ್. 57 ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಮಾಜಿಕ ಅರಣ್ಯ (ಸಂಶೋಧನೆ) ಬೆಂಗಳೂರು.

## ಕಾರ್ಯಪಾಲಕ ಅಭಿಯಂತರರ ಕಛೇರಿ, ಲೋಕೋಪಯೋಗಿ ಇಲಾಖೆ, ಉಡುಪಿ ವಿಭಾಗ, ಉಡುಪಿ

## ಅಲ್ಪಾವಧಿ-ಟೆಂಡರು ಪ್ರಕಟಣೆ (2ನೇ ಕರೆ)

**ಸಂಖ್ಯೆ: ಜಿ.ಎನ್.ಎಲ್./ಟಿ.ಎನ್.ಡಿ./ಯು.ಡಿ.ಎನ್./:2004-05/ಜೇ, ದಿನಾಂಕ: 17ನೇ ಜನವರಿ 2005**

ಈ ಕೆಳಗಿನ ಕೆಲಸಕ್ಕಾಗಿ ಪ್ರತ್ಯೇಕ ಮೊಹರಾದ ಟೆಂಡರನ್ನು ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿಸಲಾದ ಅರ್ಹ ದರ್ಜೆಯ ಗುತ್ತಿಗೆದಾರರಿಂದ ಕೆಲಸದ ಹೆಸರನ್ನು ಮೊಹರಾದ ಲಕೋಟೆಯ ಮೇಲೆ ನಮೂದಿಸಿ ನಿಯಮಿತ ಫಾರಂನಲ್ಲಿ ಎರಡು ಕವರ್ ರೀತ್ಯಾ, ದ್ವಿಪ್ರತಿಯಲ್ಲಿ ಆಹ್ವಾನಿಸಲಾಗಿದೆ. ಎರಡು ಕವರ್ ರೀತಿಯ ಟೆಂಡರ್, ತಾಂತ್ರಿಕ ಬಿಡ್, ಹಾಗೂ ಫೈನಾನ್ಸಿಯಲ್ ಬಿಡ್, ಒಳಗೊಂಡಿದೆ. 'ತಾಂತ್ರಿಕ ಬಿಡ್, ಹಾಗೂ ಫೈನಾನ್ಸಿಯಲ್ ಬಿಡ್', ಎಂದು ಗುರುತು ಹಾಕಿದ ಎರಡು ವೈವಿಧ್ಯ ಮೊಹರಾದ ಲಕೋಟೆಗಳಲ್ಲಿ ಎರಡು ಭಾಗಗಳಲ್ಲಿ ಸ್ವೀಕರಿಸಲಾಗುವುದು. ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಉಡುಪಿ ವಿಭಾಗ, ಉಡುಪಿ, ಇವರು ದಿನಾಂಕ: 08.02.2005ರ ಸಂಜೆ 4.00 ಗಂಟೆಯವರೆಗೆ ಟೆಂಡರನ್ನು ಸ್ವೀಕರಿಸುವರು. ಸಾಧ್ಯವಾದಲ್ಲಿ ಟೆಂಡರನ್ನು ಅದೇ ದಿನ ತೆರೆಯಲಾಗುವುದು.

ಖಾಲಿ ಟೆಂಡರು ಫಾರಂಗಳಿಗೆ ಅರ್ಜಿಗಳನ್ನು ನಿಗದಿ ಪಡಿಸಿದ ಬೆಲೆಯೊಂದಿಗೆ (ಇದನ್ನು ಹಿಂದಿರುಗಿಸಲಾಗುವುದಿಲ್ಲ) ದಿನಾಂಕ: 31.01.2005ರ ವರೆಗೆ ಕೆಲಸದ ಎಲ್ಲಾ ದಿನಗಳಂದು ಕಛೇರಿ ವೇಳೆಯಲ್ಲಿ ಸ್ವೀಕರಿಸಲಾಗುವುದು. ಅರ್ಜಿ ಜೊತೆಗೆ ಗುತ್ತಿಗೆದಾರರು ರಿಜಿಸ್ಟ್ರೇಶನ್‌ನ ಸರ್ಟಿಫೈಡ್ ಪ್ರತಿಯನ್ನು ಕಡ್ಡಾಯವಾಗಿ ಸಲ್ಲಿಸತಕ್ಕದ್ದು, ಖಾಲಿ ಟೆಂಡರು ಫಾರಂಗಳನ್ನು ಈ ಕಛೇರಿಯಲ್ಲಿ ದಿನಾಂಕ: 04.02.2005 ಮತ್ತು 05.02.2005 ರಂದು ನೀಡಲಾಗುವುದು.

**ಸೂಚನೆಗಳು:**

1) ಯಾವುದೇ ಟೆಂಡರನ್ನು ಅಥವಾ ಎಲ್ಲಾ ಟೆಂಡರನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸುವ ಅಥವಾ ಅಂಗೀಕರಿಸುವ ಹಕ್ಕನ್ನು ಸಂಬಂಧಪಟ್ಟ ಇಲಾಖಾ ಅಧಿಕಾರಿಯವರು ಹೊಂದಿರುತ್ತಾರೆ.
2) ಇಎಂಡಿ ಯನ್ನು ಪ್ಲೆಡ್ಜ್ ಮಾಡಲಾದ ರಾಷ್ಟ್ರೀಯ ಉಳಿತಾಯ ಸರ್ಟಿಫಿಕೇಟ್, ಬ್ಯಾಂಕ್ ಗ್ಯಾರಂಟಿ, ಕಾಲ್ ಡಿಪೋಜಿಟ್, ಡಿಮಾಂಡ್ ಡ್ರಾಫ್ಟ್, ರೂಪದಲ್ಲಿ ಸಲ್ಲಿಸುವುದು ನಿಗದಿಪಡಿಸಿದ ಮುಂಗಡ ಠೇವಣಿಯೊಂದಿಗೆ ಸಲ್ಲಿಸದಿರುವ ಟೆಂಡರನ್ನು ಪರಿಗಣಿಸಲಾಗುವುದಿಲ್ಲ.
3) ಗುತ್ತಿಗೆದಾರರು ಕೆಲಸವನ್ನು ನಿಗದಿತ ಸಮಯದಲ್ಲಿ ಮಾಡಿ ಮುಗಿಸತಕ್ಕದ್ದು, ತಪ್ಪಿದಲ್ಲಿ ಹೆಚ್ಚುವರಿ ದಂಡವನ್ನು ವಿಧಿಸಲಾಗುವುದು.
4) ಗುತ್ತಿಗೆದಾರರು ಟೆಂಡರ್ ಬಗ್ಗೆ ಅರ್ಜಿ ಸಲ್ಲಿಸುವಾಗ ಈ ತರಹದ ಅಂದರೆ ಕಾಮಗಾರಿಯ ಶೇಕಡ 30 ರಷ್ಟು ಮೊತ್ತದ ಏಕೈಕ ಪ್ರೀಸ್ಟ್ರೆಸ್‌ಡ್ (Prestressed) ಸೇತುವೆ ಕೆಲಸವನ್ನು ಆರು ತಿಂಗಳೊಳಗಾಗಿ ನಿರ್ವಹಿಸಿದ ಅನುಭವ ಹೊಂದಿದವರಾಗಿದ್ದು, ಈ ಕುರಿತ ಪ್ರಮಾಣ ಪತ್ರವನ್ನು ಸಕ್ರಮ ಅಧಿಕಾರಿಯವರಿಂದ ಪಡೆದು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.
5) ಕಾಮಗಾರಿಗೆ ಬೇಕಾದ ಉಕ್ಕು, ಸಿಮೆಂಟನ್ನು ಗುತ್ತಿಗೆದಾರರೇ ಸ್ವತಃ ಒದಗಿಸಿಕೊಳ್ಳತಕ್ಕದ್ದು, ಇದನ್ನು ಪರೀಕ್ಷೆ ಮಾಡಿಸಿ ಫಲಿತಾಂಶವು ಐ.ಎಸ್.ಎಸ್. ಗುಣವನ್ನು ಖಚಿತ ಪಡಿಸಿ ಕೆಲಸಕ್ಕೆ ಉಪಯೋಗಿಸಿಕೊಳ್ಳತಕ್ಕದ್ದು. ಈ ಅಂಶವನ್ನು ಗುತ್ತಿಗೆದಾರರು ಟೆಂಡರು ಸಲ್ಲಿಸುವಾಗ ಗಮನಿಸುವುದು.
6) ಕಾಮಗಾರಿ ನಿರ್ವಹಿಸುವರೇ, ಬೇಕಾದ ಆರ್ಥಿಕ ಸಾಮರ್ಥ್ಯ ಹೊಂದಿರುವರೇ ಎನ್ನುವ ಬಗ್ಗೆ ಟೆಂಡರ್ ಮೊಬಲಗಿನ ಶೇ.30ಕ್ಕೆ ಸಮನಾದ ಮೊಬಲಗಿನ (ಯಾವುದೇ ರಾಷ್ಟ್ರೀಕೃತ ಬ್ಯಾಂಕಿನ) ಲೈನ್ ಆಫ್ ಕ್ರೆಡಿಟ್‌ನ್ನು ತಪ್ಪದೆ ನೀಡಬೇಕು.
7) ತಾಂತ್ರಿಕ ಪುರಾವೆಯಾಗಿ ಲಗ್ತೀಕೃತ ಎಲ್ಲಾ ದಾಖಲೆಗಳನ್ನು ಜಿಲ್ಲಾ ಮಟ್ಟದ ಅಧಿಕಾರಿಗಿಂತ ಕೆಳಗಿಲ್ಲದ ಶ್ರೇಣಿಯ ಗೆಜೆಟೆಡ್ ಅಧಿಕಾರಿ ದೃಢೀಕರಿಸತಕ್ಕದ್ದು, ತಪ್ಪಿದರೆ ಬಿಡ್‌ಗಳನ್ನು ಅನರ್ಹಗೊಳಿಸಲಾಗುತ್ತದೆ. ಮೂಲ ದಾಖಲೆಗಳನ್ನು ಯಾವುದೇ ಘಟ್ಟದಲ್ಲಿ ಪರಿಶೀಲನಾರ್ಥವಾಗಿ ಕೇಳಿದಾಗ ಹಾಜರುಪಡಿಸಬೇಕು. ಮೂಲ ದಾಖಲೆಗಳನ್ನು ನೀಡಲು ತಪ್ಪಿದರೆ ತಾಂತ್ರಿಕ ಬಿಡ್‌ಗಳು ಅನರ್ಹತೆಗೊಳ್ಳುತ್ತದೆ.
8) ತಾಂತ್ರಿಕ ಬಿಡ್‌ನೊಂದಿಗೆ ಸಮುಚ್ಚಿತ ಪ್ರಮಾಣ ಪತ್ರಗಳು ಹಾಗೂ ವಿವರಗಳನ್ನು ಮಾತ್ರ ಲಗ್ತೀಕರಿಸಬೇಕು. ಕಂಪೆನಿ/ಏಜೆನ್ಸಿಗಳು/ವಾಣಿಜ್ಯ ಸಂಸ್ಥೆಗಳ ಪ್ರೊಫೈಲ್ ವಿವರಗಳನ್ನು ಲಗ್ತೀಕರಿಸಬೇಕು.
9) ಶರ್ತ ಬದ್ಧ ಟೆಂಡರುಗಳನ್ನು ಪರಿಗಣಿಸುವುದಿಲ್ಲ.
10) ಪ್ರತೀ ಟೆಂಡರುದಾರರು ಸೇತುವೆ ಕೆಲಸಕ್ಕೆ ಈ ಕೆಳಗಿನ ಯಂತ್ರಗಳನ್ನು ಸ್ವಂತ ಹೊಂದಿದ್ದು, ತಾಂತ್ರಿಕ ಬಿಡ್‌ನೊಂದಿಗೆ ಮಾಲಿಕತ್ವದ ಪುರಾವೆ ಸಹಿತ ಲಗ್ತೀಕರಿಸಬೇಕು. ತಿಳಿಸಿದ ಪ್ರಕಾರ ಮಾಲಿಕತ್ವದ ಪುರಾವೆ ರಹಿತವಾಗಿ ದೊರೆತ ತಾಂತ್ರಿಕ ಬಿಡ್‌ನ್ನು ಅನರ್ಹಗೊಳಿಸಲಾಗುವುದು.

| ಕ್ರ.ಸಂ. | ಯಂತ್ರೋಪಕರಣ ವಿವರ | ಸಂಖ್ಯೆಗಳು | ಮಾಲಿಕತ್ವದ ಪುರಾವೆ |
|---|---|---|---|
| 1 | ಕಾಂಕ್ರೀಟು ಬೇಚಿಂಗ್ ಮತ್ತು ಕಾಂಕ್ರೀಟು ಮಿಕ್ಸರ್ ಕನಿಷ್ಟ ಗಂಟೆಯೊಂದರ 20 ಘ.ಮೀ. ಸಾಮರ್ಥ್ಯದ | 1 | ಮಾರಾಟಗಾರನಿಂದ ಪರ್ಚೇಸ್ ಇನ್‌ವಾಯ್ಸ್/ ಸೇಲ್‌ಡೀಡ್‌ನ ಪ್ರತಿ |
| 2 | ಶಟರ್ ವೈಬ್ರೇಟರ್ | 6 | .............ಅದೇ............. |

| ಕ್ರ.ಸಂ. | ಯಂತ್ರೋಪಕರಣ ವಿವರ | ಸಂಖ್ಯೆಗಳು | ಮಾಲಿಕತ್ವದ ಪುರಾವೆ |
|---|---|---|---|
| 3 | ನೀಡಲ್ ವೈಬ್ರೇಟರ್ | 6 | ..............ಅದೇ.............. |
| 4 | (precasting of grider) ಗೋಸ್ಕರ ಅಧಿಕ ಸಾಮರ್ಥ್ಯದ ಉಕ್ಕಿನ ಫ್ರೇಮ್ ವರ್ಕ್ | 3 | ..............ಅದೇ.............. |
| 5 | ರೈಲ್ಸ್ ಮತ್ತು ಟ್ರಾಲೀಸ್ | 2 | ..............ಅದೇ.............. |
| 6 | 50 ಟನ್ ಸಾಮರ್ಥ್ಯದ ಲಾಂಚಿಂಗ್ ಟ್ರಸ್ಸ್‌ಡ್ | 2 | ..............ಅದೇ.............. |
| 7 | ವಿದ್ಯುತ್ ಪ್ರೀಟ್ರೆಸ್ಸಿಂಗ್ ಜಾಕ್ಸ್ - ಫಾರ್ HT Strands 12k, 13200MT-K Range ಅಥವಾ ಸರಿಸಮಾನ | 2 | ..............ಅದೇ.............. |
| 8 | ಎಲೆಕ್ಟ್ರಿಕಲ್ ಗ್ರೌಟ್ ಪಂಪ್ - 30 ಕೆಜಿ./ಚ./ಸೆಂ.ಮೀ.ಗೆ-2ಹೆಚ್.ಪಿ. | 2 | ..............ಅದೇ.............. |
| 9 | ಸ್ಪೇಂಜಿಂಗ್ ಕ್ರಿಬ್ಸ್ ಸೆಂಟ್ರಿಂಗ್ ಶೀಟ್ಸ್ | 500 ಚ.ಮೀ. | ..............ಅದೇ.............. |
| 10 | ಡಿಜಿಟಲ್ ಥಿಯೋಡ್ ಲೈಟ್ ಆಟೋಲೆವೆಲ್ ಮತ್ತು ಇತರ ಎಲೊಕ್ಟ್ರೋನಿಕ್ ಅಳತೆಯ ಉಪಕರಣಗಳು | 1 | ..............ಅದೇ.............. |
| 11 | Aggregate crushing plant with secondary screening (ಜಲ್ಲಿ ಕಲ್ಲು ತಯಾರಿಕಾ ಘಟಕ (2ನೇ ಜಾಲರಿ ಸಹಿತ) ) | 1 | ..............ಅದೇ.............. |
| 12 | ಕಾಂಕ್ರೀಟ್ ಟೆಸ್ಟಿಂಗ್ ಮೆಷಿನ್ - 200 ಟನ್ ಸಾಮರ್ಥ್ಯದ್ದು | 1 | ..............ಅದೇ.............. |
| 13 | ವಿದ್ಯುತ್ ಜನರೇಟರ್ಸ್ | 2 | ..............ಅದೇ.............. |
| 14 | ಸೆಂಟ್ರಿಫ್ಯುಗಲ್ ಪಂಪ್ | 2 | ..............ಅದೇ.............. |
| 15 | ಟಿಪ್ಪರ್ಸ್ | 4 | ಆರ್.ಟಿ.ಓ. ನೀಡಿದ ರಿಜಿಸ್ಟ್ರೇಶನ್ ಸರ್ಟಿಫೀಕೆಟ್ |
| 16 | ಸ್ಟೀಲ್ ಫಾರಂ ವರ್ಕ್ (steel form work) | - | ಮಾರಾಟಗಾರನಿಂದ ಪರ್ಚೀಸ್ ಇನ್‌ವಾಯ್ಸ್ ಪ್ರತಿ, ಪರ್ಚೀಸ್ ಇನ್‌ವಾಯ್ಸ್/ ಸೇಲ್‌ಡೀಡ್‌ನ ಪ್ರತಿ |
| 17 | ಚಿಮ್ಮುವ ಯಾಂತ್ರಿಕ ಬಾಯ್ಲರ್ | 1 | ..............ಅದೇ.............. |
| 18 | ಟ್ರಾಕ್ಟರ್ ಮೌಂಟೆಡ್ ಕಂಪ್ರೆಸ್ಸರ್ | 3 | ..............ಅದೇ.............. |

| ಕ್ರಮ ಸಂಖ್ಯೆ | ಕಾಮಗಾರಿಯ ಹೆಸರು | ಟೆಂಡರಿಗಿರಿಸಿದ ಅಂದಾಜು ಮೊತ್ತ | ಮುಂಗಡ ಠೇವಣಿ (ಇಎಂಡಿ) ರೂ. | ಕಾಮಗಾರಿ ಮುಗಿಸಲು ಕಾಲಮಿತಿ (ಮಳೆಗಾಲ ಹೊರತು ಪಡಿಸಿ) | ಟೆಂಡರ್ ನಮೂನೆ | ಟೆಂಡರ್ (ಶೆಡ್ಯೂಲ್ ಬೆಲೆ) | ಅರ್ಹ ಗುತ್ತಿಗೆದಾರರು |
|---|---|---|---|---|---|---|---|
| 1 | ಉಡುಪಿ ಜಿಲ್ಲೆ, ಉಡುಪಿ ತಾಲ್ಲೂಕು ಬ್ರಹ್ಮಾವರ ಜನ್ನಾಡಿ ರಸ್ತೆಯ ಕಿಮೀ. 2.20 ರಲ್ಲಿ ಸೀತಾನದಿಗೆ ಅಡ್ಡಲಾಗಿರುವ ಕುಸಿದ ಬಾರ್ಕೂರು ಸೇತುವೆಯ ಮೇಲ್ಹಾವಣಿ ಕೆಡವುವುದು, ಮತ್ತು ಮೇಲ್ಹಾವಣಿಯ ಪುನರ್ ನಿರ್ಮಾಣ ಹಾಗೂ ತಾತ್ಕಾಲಿಕ ತಿರುಗು ರಸ್ತೆ ನಿರ್ಮಾಣ (ಎರಡನೇ ಕರೆ) | ರೂ. 330.12 ಲಕ್ಷ | ರೂ.3,30,200.00 | 9 ತಿಂಗಳು | ದರವಾರು | ರೂ. 7700.00 | ಒಂದನೇ ದರ್ಜೆ ಗುತ್ತಿಗೆದಾರರು (ಈ ಹಿಂದೆ ಪ್ರೀಸ್ಟ್ರೆಸ್‌ಡ್ (prestressed bridge) ಕಾಮಗಾರಿ ನಿರ್ವಹಿಸಿದ ಗುತ್ತಿಗೆದಾರರಿಗೆ ಮಾತ್ರ) |

**ಕೆ. ಸುರೇಶ್ ಶೆಟ್ಟಿ**

ಪಿ.ಆರ್. 59 ಕಾರ್ಯಪಾಲಕ ಇಂಜಿನಿಯರರು, ಲೋ.ಇ. ಉಡುಪಿ ವಿಭಾಗ, ಉಡುಪಿ.

## ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರ, ಶಿವಮೊಗ್ಗ

**100 ಅಡಿ ರಸ್ತೆ, ವಿನೋಬನಗರ, ಶಿವಮೊಗ್ಗ-577204**

**ಟೆಂಡರ್ ತಿದ್ದುಪಡಿ ಪ್ರಕಟಣೆ ಸಂಖ್ಯೆ: ಶಿನಪ್ರಾ/ಕಾ-ನಿಮಾ/ಟೆಂ-1(ತಿದ್ದುಪಡಿ-1)/2004-05, ದಿನಾಂಕ: 31ನೇ ಜನವರಿ 2005**

ಈ ಕಛೇರಿ ಟೆಂಡರ್ ಪ್ರಕಟಣೆ ನಂ. ಶಿನಪ್ರಾ/ಕಾ-ನಿಮಾ/ಟೆಂ-1/2004-05 ದಿನಾಂಕ: 06.01.2005 ರಲ್ಲಿ ಈ ಕೆಳಕಂಡ ಬದಲಾವಣೆಗಳನ್ನು ಮಾಡಲಾಗಿದೆ. ಈ ತಿದ್ದುಪಡಿಗಳನ್ನು ಸೂಕ್ತವಾಗಿ ಓದಿಕೊಳ್ಳಲು ಕೋರಲಾಗಿದೆ. ಉಳಿದಂತೆ ಮೂಲ ಟೆಂಡರ್ ಪ್ರಕಟಣೆಯಲ್ಲಿ ಯಾವುದೇ ಬದಲಾವಣೆಗಳಿರುವುದಿಲ್ಲ.

1. ಟೆಂಡರ್ ಪತ್ರಗಳಿಗೆ ಮನವಿ ಸ್ವೀಕರಿಸಲು ಕಡೆಯ ದಿನಾಂಕ: 25.2.2005ರ ಸಂಜೆ 5.30 ಘಂಟೆಯವರೆಗೆ.
2. ಖಾಲಿ ಟೆಂಡರ್ ಪತ್ರಗಳನ್ನು ನೀಡಿಕೆ ದಿನಾಂಕ: 25.2.2005ರ ಸಂಜೆ 5.30 ಘಂಟೆಯವರೆಗೆ.

**ಹಾಗೂ**

**II. ಅರ್ಹತಾ ಅಗತ್ಯತೆ:-** ಶೀರ್ಷಿಕೆ ಅಡಿಯಲ್ಲಿನ ಕ್ರಮ ಸಂಖ್ಯೆ (2)ರ 2ನೇ ವಾಕ್ಯವನ್ನು ಈ ಕೆಳಕಂಡಂತೆ ಓದಿಕೊಳ್ಳುವುದು.

ಅದರಲ್ಲಿ ವಸತಿ ನಿವೇಶನಗಳು, ರಸ್ತೆಗಳ ರಚನೆ, ಪಕ್ಕದ ಚರಂಡಿಗಳ ನಿರ್ಮಾಣ, ಸಿ.ಡಿ. ಕಾಮಗಾರಿಗಳು ಮುಂತಾದವುಗಳನ್ನೊಳಗೊಂಡ ರೂ.100 ಲಕ್ಷ (ಒಂದು ನೂರು ಲಕ್ಷಗಳು) ಮೌಲ್ಯಕ್ಕಿಂತ ಕಡಿಮೆ ಇಲ್ಲದ ವಸತಿ ಬಡಾವಣೆಗೆ ಸಂಬಂಧಿಸಿದ ಒಂದು ಇಡೀ ಕೆಲಸವನ್ನು ಪೂರ್ಣಗೊಳಿಸಿರಬೇಕು.

ಪಿ.ಡಿ. 20 ಆಯುಕ್ತರು, ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರ, ಶಿವಮೊಗ್ಗ.

**ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು**

**ಅಧಿಸೂಚನೆ ಸಂಖ್ಯೆ: ಸಿಬ್ಬಂದಿ (1):208:2001, ದಿನಾಂಕ: 15ನೇ ಜನವರಿ 2005**

**ವಿಷಯ:** ಚಿಕ್ಕಮಗಳೂರು ಜಿಲ್ಲಾ ಪೊಲೀಸ್ ಘಟಕದಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಬ್ಯಾಕ್‌ಲಾಗ್ ಹುದ್ದೆಗಳಿಗೆ ನೇಮಕಾತಿಯ ಕುರಿತು.

**ಉಲ್ಲೇಖ:** 1) ಪ್ರಧಾನ ಕಛೇರಿಯ ಪತ್ರ ಸಂಖ್ಯೆ: 32:ಸಿಬ್ಬಂದಿ.4:2003-04, ದಿನಾಂಕ: 10.11.2003.

2) ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರುರವರ ಪತ್ರ ನಂ:ಜಿಸಕಅ:ಸಿಬ್ಬಂದಿ.4: ಸಿಆರ್:2:02-03, ದಿನಾಂಕ: 13.1.2005.

ಚಿಕ್ಕಮಗಳೂರು ಜಿಲ್ಲೆಯಲ್ಲಿ ಖಾಲಿ ಇರುವ ಸಿವಿಲ್ ಪೊಲೀಸ್ ಕಾನ್ಸ್‌ಟೇಬಲ್ ಹುದ್ದೆಗಳಲ್ಲಿ ಪರಿಶಿಷ್ಟ ಜಾತಿಗೆ ಮೀಸಲು ಇರುವ 2 ಹಾಗೂ ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಗೆ ಮೀಸಲು ಇರುವ 2 ಬ್ಯಾಕ್‌ಲಾಗ್ ಹುದ್ದೆಗಳನ್ನು ಹಾಗೂ ಸಶಸ್ತ್ರ ಮೀಸಲು ಪೇದೆಯ ಹುದ್ದೆಯಲ್ಲಿ ಪರಿಶಿಷ್ಟ ಜಾತಿಗೆ ಮೀಸಲು ಇರುವ ಒಂದು ಬ್ಯಾಕ್‌ಲಾಗ್ ಹುದ್ದೆಯನ್ನು ಸರ್ಕಾರದ ಅಧಿಸೂಚನೆ ನಂ. ಡಿಪಿಎಆರ್:13:ಎಸ್‌ಬಿಸಿ:2001 ದಿನಾಂಕ: 21.11.2001 ರಂತೆ ಭರ್ತಿ ಮಾಡಲು ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ಅರ್ಹ ಅಭ್ಯರ್ಥಿಗಳಿಂದ ಆಹ್ವಾನಿಸಲಾಗಿದೆ. ಅಭ್ಯರ್ಥಿಗಳು ಈ ಅಧಿಸೂಚನೆಯೊಡನೆ ಪ್ರಕಟಿಸಿರುವ ನಿಗದಿತ ಅರ್ಜಿ ನಮೂನೆಯಲ್ಲಿ ಭರ್ತಿ ಮಾಡಿದ ಅರ್ಜಿಗಳನ್ನು ದಿನಾಂಕ: 15.03.05 ರಂದು ಸಾಯಂಕಾಲ 5.00 ಗಂಟೆಯೊಳಗೆ ಜಿಲ್ಲಾ ಪೊಲೀಸ್ ಕಛೇರಿ, ಚಿಕ್ಕಮಗಳೂರು ಇಲ್ಲಿಗೆ ತಲುಪಿಸತಕ್ಕದ್ದು.

**ವಯೋಮಿತಿ:-**

ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಂದರೆ 15.03.2005ಕ್ಕೆ ಅಭ್ಯರ್ಥಿಗಳಿಗೆ ಕನಿಷ್ಟ 18 ವರ್ಷ ವಯಸ್ಸಾಗಿರಬೇಕು ಮತ್ತು ಗರಿಷ್ಟ 40 ವರ್ಷ ಮೀರಿರಬಾರದು. ಪುರುಷ ಅಭ್ಯರ್ಥಿಗಳು ಮಾತ್ರ ಅರ್ಜಿ ಸಲ್ಲಿಸಬಹುದಾಗಿರುತ್ತದೆ.

ಹುದ್ದೆಗಳ ವರ್ಗೀಕರಣ ವಿವರಗಳು ಈ ಕೆಳಗಿನಂತಿರುತ್ತದೆ.

**ನಾಗರೀಕ ಪೊಲೀಸ್ ಪೇದೆ - 4**

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಗ್ರಾಮೀಣ ಅಭ್ಯರ್ಥಿ | ಮಾಜಿ ಸೈನಿಕರು | ಪಿ.ಡಿ.ಪಿ. | ಕನ್ನಡ ಮಾಧ್ಯಮ | ಇತರರು |
|---|---|---|---|---|---|---|
| ಪರಿಶಿಷ್ಟ ಜಾತಿ | 2 | 1 | - | - | - | 1 |
| ಪರಿಶಿಷ್ಟ ಪಂಗಡ | 2 | 1 | - | - | - | 1 |
| **ಒಟ್ಟು** | **4** | **2** | - | - | - | **2** |

**ಸಶಸ್ತ್ರ ಮೀಸಲು ಪೊಲೀಸ್ ಪೇದೆ - 1**

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಗ್ರಾಮೀಣ ಅಭ್ಯರ್ಥಿ | ಮಾಜಿ ಸೈನಿಕರು | ಪಿ.ಡಿ.ಪಿ. | ಕನ್ನಡ ಮಾಧ್ಯಮ | ಇತರರು |
|---|---|---|---|---|---|---|
| ಪರಿಶಿಷ್ಟ ಜಾತಿ | 1 | - | - | - | - | 1 |
| **ಒಟ್ಟು** | **1** | - | - | - | - | **1** |

**ವಿದ್ಯಾರ್ಹತೆ:**

1) ನಾಗರೀಕ ಪೊಲೀಸ್ ಪೇದೆ ಹುದ್ದೆಗೆ ಪಿಯುಸಿ : 12ನೇ ತರಗತಿ : ಜೆ.ಓ.ಸಿ. : ಜೆ.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆಯಾಗಿರಬೇಕು.

2) ಸಶಸ್ತ್ರ ಮೀಸಲು ಪೊಲೀಸ್ ಪೇದೆ ಹುದ್ದೆಗೆ ಎಸ್.ಎಸ್.ಎಲ್.ಸಿ. : 10ನೇ ತರಗತಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆಯಾಗಿರಬೇಕು.

**ಟಿಪ್ಪಣಿ:**

**ನಾಗರೀಕ ಪೊಲೀಸ್ ಪೇದೆ ಹುದ್ದೆಗಳಿಗೆ ಮಾತ್ರ:**

1) ವೃತ್ತಿ ತರಬೇತಿ ಇಲಾಖೆಯು ನಡೆಸುವ ನಾಲ್ಕು (4) ಸೆಮಿಸ್ಟರ್‌ಗಳನ್ನೊಳಗೊಂಡ ಕೋರ್ಸ್‌ನಲ್ಲಿ ಅಭ್ಯರ್ಥಿಯು ತೇರ್ಗಡೆಯಾಗಿದ್ದಲ್ಲಿ ಅವರನ್ನು ಜೆ.ಓ.ಸಿ. ಅಭ್ಯರ್ಥಿ ಎಂದು ಪರಿಗಣಿಸಲಾಗುವುದು. ಜೆ.ಓ.ಸಿ. ತೇರ್ಗಡೆಯಾದ ಅಭ್ಯರ್ಥಿಗಳಿಗೆ 2ನೇ ಮತ್ತು 4ನೇ ಸೆಮಿಸ್ಟರ್ ಆಯ್ಕೆ ವಿಷಯದ ಮತ್ತು ನಾಲ್ಕನೇ ಸೆಮಿಸ್ಟರ್‌ನ ಎರಡು ಭಾಷೆಗಳಲ್ಲಿ ಪಡೆದ ಅಂಕಗಳನ್ನು ಶ್ರೇಣಿಯನ್ನು (Ranking) ಲೆಕ್ಕಕ್ಕೆ ತೆಗೆದುಕೊಳ್ಳಲಾಗುವುದು. ಒಂದು ವೇಳೆ ಜೆ.ಓ.ಸಿ. ಅಭ್ಯರ್ಥಿಗಳಿಗೆ ಎರಡು ಭಾಷೆಗಳಲ್ಲಿ ವಿನಾಯ್ತಿ ನೀಡಲಾಗಿದ್ದಲ್ಲಿ 2ನೇ ಮತ್ತು 4ನೇ ಸೆಮಿಸ್ಟರ್ ಅಂಕಗಳ ಜೊತೆಗೆ ಪಿ.ಯು.ಸಿ. ಪರೀಕ್ಷೆಯ ಎರಡು ಭಾಷೆಗಳ ಅಂಕಗಳನ್ನು ಪರಿಗಣಿಸಲಾಗುವುದು. ಒಂದು ವೇಳೆ ಜೆ.ಓ.ಸಿ. ಅಭ್ಯರ್ಥಿಗಳು ಒಂದೇ ಭಾಷೆಯಲ್ಲಿ ವಿನಾಯಿತಿ ಪಡೆದಿದ್ದಲ್ಲಿ ಎರಡನೇ ಮತ್ತು ನಾಲ್ಕನೇ ಸೆಮಿಸ್ಟರ್‌ಗಳ ಆಯ್ಕೆ ವಿಷಯದಲ್ಲಿ ಪಡೆದ ಅಂಕಗಳ ಜೊತೆಗೆ ಯಾವ ಭಾಷೆಯಲ್ಲಿ ವಿನಾಯಿತಿ ಪಡೆಯಲಾಗಿದೆಯೋ ಆ ಭಾಷೆಗಳಲ್ಲಿ ಪಿ.ಯು.ಸಿ. ಪರೀಕ್ಷೆಯಲ್ಲಿ ಪಡೆದ ಅಂಕ ಮತ್ತು ಯಾವ ಭಾಷೆಯಲ್ಲಿ ವಿನಾಯಿತಿ ದೊರಕಿಲ್ಲವೋ ಆ ಭಾಷೆಯಲ್ಲಿ ಜೆ.ಓ.ಸಿ. ಯ ನಾಲ್ಕನೇ ಸೆಮಿಸ್ಟರ್‌ನಲ್ಲಿ ಪಡೆದ ಅಂಕಗಳನ್ನು ಪರಿಗಣನೆಗೆ ತೆಗೆದುಕೊಳ್ಳಲಾಗುವುದು.

2) ವೃತ್ತಿ ತರಬೇತಿ ಇಲಾಖೆಯು ನಡೆಸುವ ಎರಡು ವರ್ಷದ ಕೋರ್ಸ್‌ನಲ್ಲಿ ಅಭ್ಯರ್ಥಿಯು ತೇರ್ಗಡೆ ಹೊಂದಿದ್ದಲ್ಲಿ ಅಂತಹ ಅಭ್ಯರ್ಥಿಯನ್ನು ಜೆ.ಎಲ್.ಸಿ. ಅಭ್ಯರ್ಥಿ ಎಂದು ಪರಿಗಣಿಸಲಾಗುವುದು. ಜೆ.ಎಲ್.ಸಿ. ಅಭ್ಯರ್ಥಿಯು ಎರಡು ವರ್ಷಗಳ ಕೋರ್ಸ್‌ನಲ್ಲಿ ಪಡೆದಿರುವ ಅಂಕಗಳ ಆಧಾರದ ಮೇಲೆ ಶ್ರೇಣಿಯನ್ನು (Ranking) ಪರಿಗಣನೆಗೆ ತೆಗೆದುಕೊಳ್ಳಲಾಗುವುದು.

**ದೇಹದಾರ್ಢ್ಯತೆ:**

**ನಾಗರೀಕ : ಸಶಸ್ತ್ರ ಪೊಲೀಸ್ ಪೇದೆ:**

| | | | | | |
|---|---|---|---|---|---|
| ಎತ್ತರ | : | 168 ಸೆಂ.ಮೀ. | | | |
| ಎದೆ ಸುತ್ತಳತೆ | : | 5 ಸೆಂ.ಮೀ. ವಿಸ್ತಾರಗೊಂಡರೆ 86 ಸೆಂ.ಮೀ. ಕಡಿಮೆ ಇಲ್ಲದಂತೆ ಎದೆ ಸುತ್ತಳತೆ ಹೊಂದಿರಬೇಕು. | | | |
| ದೃಷ್ಟಿ | : | | **ಉತ್ತಮ** | | **ಕನಿಷ್ಠ** |
| | | 1) ದೂರದೃಷ್ಟಿ | 6:9 | ಅಥವಾ | 6:9 |
| | | | 6:9 | | 6:12 |
| | | 2) ಸಮೀಪ ದೃಷ್ಟಿ | 0:6 | | 0:8 |

ಪ್ರತಿ ಕಣ್ಣು ಸಂಪೂರ್ಣ ಕ್ಷೇತ್ರದೃಷ್ಟಿ ಹೊಂದಿರಲೇಬೇಕು. ವರ್ಣಾಂಧತೆ, ಮೆಳ್ಳೆಗಣ್ಣು ಅಥವಾ ಯಾವುದೇ ಕಣ್ಣಿನ ಅಥವಾ ರೆಪ್ಪೆಯ ವಿಕೃತ ಸ್ಥಿತಿಯನ್ನು ಅನರ್ಹತೆ ಎಂದು ಪರಿಗಣಿಸಲಾಗುವುದು.

**ಶ್ರವಣ ಶಕ್ತಿ:**

1) ರಿನ್ನೇಸ್ ಪರೀಕ್ಷೆ 2) ವೆಬ್ಬರ್ ಪರೀಕ್ಷೆ 3) ವೆರ್ಟಿಗೋ ಪರೀಕ್ಷೆ.

ಮೇಲಿನ ಪರೀಕ್ಷೆಗಳಲ್ಲಿ ಯಾವುದೇ ನ್ಯೂನ್ಯತೆ ಕಂಡು ಬಂದಲ್ಲಿ ಅನರ್ಹತೆ ಎಂದು ಪರಿಗಣಿಸಲಾಗುವುದು.

**ಈ ಕೆಳಕಂಡವು ದೈಹಿಕ ಅನರ್ಹತೆಗಳಾಗಿರುತ್ತದೆ:-**

1) ತಾಗುಮಂಡಿ 2) ಬಾಗಿದ ಕಾಲುಗಳು 3) ಚಪ್ಪಟೆ ಪಾದ 4) ಅಪಧಮನಿ ಊತ

**ತರಬೇತಿ ಮತ್ತು ಖಾಯಂಪೂರ್ವ ಅವಧಿ:-**

ನೇಮಕಗೊಂಡ ಅಭ್ಯರ್ಥಿಗಳು ಪೊಲೀಸ್ ತರಬೇತಿ ಶಾಲೆಯಲ್ಲಿ ಒಂಭತ್ತು (9) ತಿಂಗಳುಗಳು ಕಾಲ ಮೂಲ ತರಬೇತಿಯನ್ನು ಪಡೆಯಬೇಕು. ಹಾಗೂ ತರಬೇತಿಯಲ್ಲಿ ನಿಗದಿಪಡಿಸಿದ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕು. ತರಬೇತಿ ಶಾಲೆಗಳಲ್ಲಿ ತರಬೇತಿ ಮುಗಿಸಿದ ನಂತರ ಪೊಲೀಸ್ ಠಾಣೆಗಳಲ್ಲಿ ಆರು (6) ತಿಂಗಳು ಪ್ರಾಯೋಗಿಕ ತರಬೇತಿಗಾಗಿ ನಿಯೋಜಿಸಲಾಗುವುದು.

**ಖಾಯಂಪೂರ್ವ ಅವಧಿ:**

ತರಬೇತಿ ಅವಧಿಯೂ ಸೇರಿದಂತೆ ಎರಡು ವರ್ಷ ಆರು ತಿಂಗಳುಗಳಾಗಿರುವುದು.

**ಲಗತ್ತುಗಳು:**

1) ಅರ್ಹತಾ ಪರೀಕ್ಷೆಯ ಅಂಕಪಟ್ಟಿ

2) ಜನ್ಮ ದಿನಾಂಕ ಪ್ರಮಾಣ ಪತ್ರ (ಎಸ್‌ಎಸ್‌ಎಲ್‌ಸಿ ಅಂಕಪಟ್ಟಿ : ವರ್ಗಾವಣೆ ಪ್ರಮಾಣಪತ್ರ)

3) ಎರಡು ಲಕೋಟೆ 9" x 4" (Envelope) ನಲ್ಲಿ ರೂ.5.00 ಸ್ಟ್ಯಾಂಪ್ ಅಂಟಿಸಿ ನಿಮ್ಮ ಸರಿಯಾದ ಅಂಚೆಯ ವಿಳಾಸವನ್ನು ಬರೆದು ಅರ್ಜಿಯೊಂದಿಗೆ ಲಗತ್ತಿಸುವುದು.

4) ಅರ್ಜಿಯಲ್ಲಿ ಫೋಟೋ ಅಂಟಿಸಲು ನಿಗದಿಪಡಿಸಿದ ಸ್ಥಳದಲ್ಲಿ ನಿಮ್ಮ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಅಂಟಿಸಿ ಅದರ ಮೇಲೆ ಪೂರ್ಣಸಹಿ ಮಾಡುವುದು.

5) ಪರಿಶಿಷ್ಟ ಜಾತಿ: ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ಸಂಬಂಧಪಟ್ಟ ತಹಶೀಲ್ದಾರ್ ರವರಿಂದ ವಿತರಿಸಿದ "ನಮೂನೆ-ಡಿ" ರಲ್ಲಿ ಜಾತಿ ಪ್ರಮಾಣ ಪತ್ರ ಸಲ್ಲಿಸುವುದು.

6) ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆ ದಿನಾಂಕದ ನಂತರದಲ್ಲಿ ಸಲ್ಲಿಸಲಾಗುವ ಲಗತ್ತುಗಳನ್ನು ಸ್ವೀಕರಿಸಲಾಗುವುದಿಲ್ಲ. ಹಾಗೂ ಅವುಗಳನ್ನು ತಿರಸ್ಕರಿಸಲಾಗುವುದು.

7) ಈ ವರ್ಗಕ್ಕೆ ಸೇರದ ಅಭ್ಯರ್ಥಿಗಳು ಯಾವುದೇ ರೀತಿಯ ಶುಲ್ಕ ಪಾವತಿಸಬೇಕಾಗಿರುವುದಿಲ್ಲ. ಈ ಎಲ್ಲಾ ದಾಖಲಾತಿಗಳ ದೃಢೀಕೃತ ಜೆರಾಕ್ಸ್ ಪ್ರತಿ ನೀಡಬೇಕು.

ಸೂಚನೆ:

1) ಅರ್ಜಿಯಲ್ಲಿ ಭರ್ತಿ ಮಾಡಿರುವ ಮಾಹಿತಿ ಮತ್ತು ಅದರೊಂದಿಗೆ ಲಗತ್ತಿಸಿರುವ ಪ್ರಮಾಣ ಪತ್ರಗಳು ಸುಳ್ಳು ಮಾಹಿತಿ ನೀಡಿದ್ದಾಗಿ, ನೇಮಕಾತಿಯ ಯಾವುದೇ ಹಂತದಲ್ಲಿ ಕಂಡು ಬಂದಲ್ಲಿ ಅಂತಹ ಅರ್ಜಿಗಳನ್ನು ಪತ್ರ ವ್ಯವಹಾರವಿಲ್ಲದೆ ತಿರಸ್ಕರಿಸಲಾಗುವುದು.

2) ಅಭ್ಯರ್ಥಿಯು ಯಾವುದೇ ಅಪರಾಧ ಮೊಕದ್ದಮೆಯಲ್ಲಿ ಬಂಧನಕ್ಕೆ ಒಳಪಟ್ಟಿರಬಾರದು. ಅಲ್ಲದೆ ಅಪರಾಧ ಮೊಕದ್ದಮೆಯಲ್ಲಿ ತನಿಖೆಗೆ ಒಳಗಾಗಿರಬಾರದು : ಅಪರಾಧ ಪ್ರಕರಣದಲ್ಲಿ ದೋಷಿಯಾಗಿರಬಾರದು. ಆಗಿದ್ದಲ್ಲಿ ಅಂತಹ ಅಭ್ಯರ್ಥಿಯು ನೇಮಕಾತಿಗೆ ಅನರ್ಹರಾಗಿರುತ್ತಾರೆ.

3) ಅಪೂರ್ಣ ಅರ್ಜಿಗಳನ್ನು ತಿರಸ್ಕೃತಗೊಳಿಸಲಾಗುವುದು.

4) ಸುಳ್ಳು ಮಾಹಿತಿ ಅಥವಾ ನಕಲಿ ಪ್ರಮಾಣ ಪತ್ರ : ದಾಖಲಾತಿಗಳನ್ನು ಸಲ್ಲಿಸಿ ನೌಕರಿ ಪಡೆದಿರುವುದು ಯಾವುದೇ ಸಂದರ್ಭ ಕಂಡು ಬಂದಲ್ಲಿ ಅವರನ್ನು ಯಾವುದೇ ಮುನ್ಸೂಚನೆ ನೀಡದೆ ನೌಕರಿಯಿಂದ ವಜಾ ಮಾಡುವುದರ ಜೊತೆಗೆ ಅವರ ವಿರುದ್ಧ ಕಾನೂನು ರೀತಿಯ ಕ್ರಮ ತೆಗೆದುಕೊಳ್ಳಲಾಗುವುದು.

5) ಅಭ್ಯರ್ಥಿಗಳು ತೆಗೆದುಕೊಂಡಿರುವ ಮತ್ತು ಭರ್ತಿ ಮಾಡಿದ ಅರ್ಜಿಗಳನ್ನು ನೋಂದಾಯಿತ ಅಂಚೆ : ಕೊರಿಯರ್ ಮುಖಾಂತರ ಅಥವಾ ಖುದ್ದಾಗಿ ಸಂಬಂಧಪಟ್ಟ ಪೊಲೀಸ್ ಸೂಪರಿಂಟೆಂಡೆಂಟ್ ರವರ ಕಛೇರಿಗೆ ನಿಗದಿ ಪಡಿಸಿದ ದಿನಾಂಕದೊಳಗೆ ತಲುಪಿಸತಕ್ಕದ್ದು. ಹಾಗೂ ತಲುಪಿಸಿದ್ದಕ್ಕೆ ಸಂಬಂಧಪಟ್ಟವರಿಂದ ದಿನಾಂಕ ಮತ್ತು ಸಹಿಯುಳ್ಳ ಸ್ವೀಕೃತಿಯನ್ನು ಪಡೆದುಕೊಳ್ಳತಕ್ಕದ್ದು.

ನೇಮಕಾತಿ ಪ್ರಾಧಿಕಾರಗಳು ಮತ್ತು ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ.

**ಕರ್ನಾಟಕ ರಾಜ್ಯ ಪೊಲೀಸ್**

**ಚಿಕ್ಕಮಗಳೂರು, ಜಿಲ್ಲಾ ನಾಗರೀಕ ಪೊಲೀಸ್ ಪೇದೆ : ಸಶಸ್ತ್ರ ಪೊಲೀಸ್ ಪೇದೆ (ಪರಿಶಿಷ್ಟ ಜಾತಿ : ಪರಿಶಿಷ್ಟ ಪಂಗಡ)**

**ಬ್ಯಾಕ್‌ಲಾಗ್ ಹುದ್ದೆಗಳ ನೇಮಕಾತಿ**

**ಅರ್ಜಿ ನಮೂನೆ**

1. ಅಭ್ಯರ್ಥಿಯ ಪೂರ್ಣ ಹೆಸರು :
2. ತಂದೆಯ ಹೆಸರು :
3. ಅಭ್ಯರ್ಥಿಯ ಅಂಚೆ ವಿಳಾಸ :
4. ಹುಟ್ಟಿದ ದಿನಾಂಕ :
5. ವರ್ಗ. (ಸರಿಯಾದ ಚೌಕದಲ್ಲಿ ಗುರುತು ಹಾಕಿ) :

| ಎಸ್.ಸಿ. | ಎಸ್.ಟಿ. |
|---|---|
| | |

6. ಗುಂಪು. (ಸರಿಯಾದುದಕ್ಕೆ ಗುರುತು ಹಾಕಿ) :

| ಗ್ರಾಮೀಣ | ನಿಯೋಜನೆ ನಿರಾಶ್ರಿತ | ಮಾಜಿ ಸೈನಿಕ | ಕನ್ನಡ ಮಾಧ್ಯಮ | ಇತರೆ |
|---|---|---|---|---|
| | | | | |

7. ವಿದ್ಯಾರ್ಹತೆ :

(ಅ) ನಾಗರೀಕ ಪೊಲೀಸ್ ಪೇದೆ ಹುದ್ದೆಗೆ

| ಪಿಯುಸಿ | ಐಎಸ್‌ಸಿ | ಎಸ್‌ಎಸ್‌ಸಿಇ | ಜೆಓಸಿ | ಜೆಎಲ್‌ಸಿ | ಇತರೆ |
|---|---|---|---|---|---|
| | | | | | |

(ಅ) ಸಶಸ್ತ್ರ ಪೊಲೀಸ್ ಪೇದೆ ಹುದ್ದೆಗೆ ಮಾತ್ರ

| ಎಸ್‌ಎಸ್‌ಎಲ್‌ಸಿ | ಐಸಿಎಸ್‌ಇ | ಎಸ್‌ಎಸ್‌ಇ | ಇತರೆ |
|---|---|---|---|
| | | | |

8. ತೇರ್ಗಡೆ ವಿವರ :

| ಗರಿಷ್ಠ ಅಂಕಗಳು | ಗಳಿಸಿದ ಅಂಕಗಳು |
|---|---|
| | |

**ಘೋಷಣೆ:**

ಮೇಲೆ ಹೇಳಿದ ವಿವರಗಳು ನನಗೆ ತಿಳಿದ ಮಟ್ಟಿಗೆ ಮತ್ತು ನಾನು ನಂಬುವಷ್ಟರ ಮಟ್ಟಿಗೆ ನಿಜವೆಂದು ಈ ಮೂಲಕ ಘೋಷಿಸುತ್ತೇನೆ. ಯಾವುದೇ ಮಾಹಿತಿಯು (ಪರೀಕ್ಷೆ ನೇಮಕಾತಿ ಮುಂದೆ ಅಥವಾ ತರುವಾಯ) ಸುಳ್ಳು ಅಥವಾ ತಪ್ಪೆಂದು ಕಂಡು ಬಂದ ಸಂದರ್ಭದಲ್ಲಿ ಅಥವಾ ಅನರ್ಹತೆ ಪತ್ತೆ ಆದ ಸಂದರ್ಭದಲ್ಲಿ ನೇಮಕಾತಿ ಸಮಿತಿಯು ನನ್ನ ವಿರುದ್ಧ ಕ್ರಮ ಕೈಗೊಳ್ಳಬಹುದಾಗಿದೆಯೆಂದು ನನಗೆ ತಿಳಿದಿರುತ್ತದೆ.

ನಾನು ಅಧಿಸೂಚನೆಯ ನಿಯಮಗಳನ್ನು ಜಾಗರೂಕತೆಯಿಂದ ಓದಿರುತ್ತೇನೆ ಮತ್ತು ಅವುಗಳಿಗೆ ಬದ್ಧನಾಗಿರುತ್ತೇನೆ. ನಾನು ಅರ್ಜಿ ಸಲ್ಲಿಸಿದ ಹುದ್ದೆಯ ನೇಮಕಾತಿಗೆ ನಿಗದಿಪಡಿಸಿದ ವಯೋಮಿತಿ, ವಿದ್ಯಾರ್ಹತೆ ಮುಂತಾದ ಅರ್ಹತೆಯ ಎಲ್ಲಾ ಷರತ್ತುಗಳನ್ನು ಪೂರೈಸುವುದಾಗಿ ಮತ್ತು ಯಾವುದೇ ಇದೆ ಬಗೆಯ ಪರೀಕ್ಷೆಗೆ ಹಾಜರಾಗದಂತೆ ನಾನು ಪರೀಕ್ಷೆಯಿಂದ ಉಚ್ಚಾಟಿಸಲ್ಪಟ್ಟಿರುವುದಿಲ್ಲವೆಂದು ಸಹ ಘೋಷಿಸುತ್ತೇನೆ.

ಅರ್ಜಿದಾರರ ಸಹಿ.

ಪಿ.ಆರ್. 63 ನೇಮಕಾತಿ ಪ್ರಾಧಿಕಾರಗಳು ಮತ್ತು ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ.

**ಅಪರ ಪೊಲೀಸ್ ಮಹಾ ನಿರ್ದೇಶಕರವರ ಕಛೇರಿ, ಕರ್ನಾಟಕ ರಾಜ್ಯ ಮೀಸಲು ಪೊಲೀಸ್,**

**ನಂ.2, ನೃಪತುಂಗ ರಸ್ತೆ, ಬೆಂಗಳೂರು-560 001**

**ಟೆಂಡರ್ ಪ್ರಕಟಣೆ ಸಂಖ್ಯೆ: ವಾಸಾವಿ/40/2004-05, ದಿನಾಂಕ: 31ನೇ ಜನವರಿ 2005**

ಪೊಲೀಸ್ ಇಲಾಖೆಯ ಕರ್ನಾಟಕ ರಾಜ್ಯ ಮೀಸಲು ಪೊಲೀಸ್ (ಕೆ.ಎಸ್.ಆರ್.ಪಿ.) ಘಟಕದಲ್ಲಿ ಮೋಟಾರ್ ವಾಹನಗಳ ದುರಸ್ತಿ ಕೇಂದ್ರ ಕಾರ್ಯಾಗಾರವನ್ನು (Central Workshop) ಸ್ಥಾಪಿಸಲು ಬೇಕಾದ ಉಪಕರಣಗಳನ್ನು ಸರಬರಾಜು ಮಾಡಲು ಮೊಹರು ಮಾಡಿರುವ ದರಪಟ್ಟಿಗಳನ್ನು ಆಹ್ವಾನಿಸಲಾಗಿದೆ.

**LIST OF LATHE MACHINERY EQUIPMENTS AND TOOLS REQUIRED FOR CENTRAL WORK SHOP**

| Sl.No. | Particulars | Quantity |
|---|---|---|
| 1 | Crank Shaft Grinding Machine 60" | 1 |
| 2 | Re-boring Machine 077 Single Speed with Tools Box | 1 |
| 3 | Re-boring Machine 094 Single Speed for Cars & Jeep with Tools | 1 |
| 4 | Line Boring Machine 1 1/4 & 1/2 Cap. | 1 |
| 5 | Connecting Rod Aligner Sunun type | 1 |
| 6 | Valve Refresher | 1 |
| 7 | Connecting Rod Boring Machine | 1 |
| 8 | Bench Grinder 8", 1/2 HP, 3 Phase | 1 |
| 9 | Puller Type Grinding Machine 1" Cap. Geared Type | 1 |
| 10 | Hand Drilling Machine 1/2" Cap. Portable | 1 |
| 11 | Lathe Machine 6' long with Chuk, Motor & Accessories. | 1 |

| Sl.No. | Particulars | Quantity |
|---|---|---|
| 12 | Adjustable Reamer Set H4-H14 | 1 |
| 13 | Vernier Calliper 6", 8" & 10" | 1 |
| 14 | Micro Meter 0-25, 25-50, 50-75, 75-100 | 1 |
| 15 | Dial Bore Guage 50-100 | 1 |
| 16 | Break Drum Facing Lathe | 1 |
| 17 | Line Boring Machine 1 1/4" | 1 |
| 18 | Working Table 3'X3' | 2 |
| 19 | Generator 15KVA "KIRLOSKAR" make | 1 |
| 20 | Body Jack | 4 |
| 21 | AG4 Hand Grinder | 1 |
| 22 | Drill Bit set 1.5-13mm | 1 |
| 23 | Hydraulic Trolley Jack 10 Ton Cap. | 2 |
| 24 | Hydraulic Trolley Jack 2.5 Ton Cap. | 2 |
| 25 | Steel Proves Adjustable Small set of 8 Pc. | 1 |
| 26 | Steel Proves Adjustable Big set of 8 Pc. | 1 |
| 27 | Hydraulic Press 8 Ton Cap. | 1 |
| 28 | Pneumatic Socket Wrench 1/2" with Socket Pipe Accessories. | 1 |
| 29 | Battery Servicing Set | 1 |
| 30 | Drilling Machine Portable 13mm & Angle Grinder | 2 |
| 31 | Service Trolley 4X6 | 1 |
| 32 | Gas Welding Machine only | 2 |
| 33 | D.E. Ring Set 6-46mm, Box Spanner Set 11-32 & 22-50mm | 2 |
| 34 | Engineering Feller 6,8,10,12, Flat 1 Round, Half Round, Square | 1 |
| 35 | Allen Key Set 1.5-17mm-1/16" to 1/2" | 1 |
| 36 | Hole Punch Kit | 1 |
| 37 | Mechanical Jack 45 Ton-2 Nos, 10 Ton-2 Nos. Scissors Jack Hydraulic Jack Bottle 20 Ton and 5 Ton | 1 |
| 38 | Bolt Reviting Machine Small & Big | 2 |
| 39 | Check Nut Spanner 407, 608, 1210, Steering Puller, Pulley Puller, Tie Rod End, Ring Comp & Expander | 2 |
| 40 | Puller Set for Car, Jeep, Hub & Check Nut Puller | 1 |
| 41 | Armature Testing Gloweer | 1 |
| 42 | Alternate Dynamo Repair Kit Tester | 1 |
| 43 | Screw Driver Set Flat & Star Set of 16 Pc. Impact Driver | 1 |
| 44 | Break Down Kit | 1 |
| 45 | Anvil 50kg. & 100kg. with Chisel and Cutter | 1 |
| 46 | Arber Press No.3 | 1 |
| 47 | Tap & Die Set with Tap Handle & Wrench mm. And inches. | 1 |
| 48 | Electric Blower | 1 |
| 49 | Number Punch & Letter Punch 2/16, 5/16, 3/16 & 1/8 | 1 |
| 50 | Bench Vice No.2, 5 & 8 | 1 |
| 51 | Hand Shearing Machine | 1 |
| 52 | Paint Spray Gun with all accessories | 2 |
| 53 | Tinkering Set | 2 |
| 54 | Hammer B.P. Sledge 200, 500, 800 Gms. 1,2,4,6,8,10 & 14 Lbs. With | 1 |
| 55 | Spark Plug Cleaner & Tester | 1 |
| 56 | Engine Lifting Crank & Trolley Type | 1 |
| 57 | Multipurpose Trolley 2 x 4 | 1 |
| 58 | Tray for cleaning 1* 1/2, 2*, 3 *3 | 1 |
| 59 | Deep Socket 10mm to 30mm | 1 |
| 60 | Set of Pliers Cutting, Nose, Lock, Grip, Gas, Pilers | 2 |
| 61 | Soldering Gun 25 Vatt 50 Vatt & 100 Vatt | 1 |
| 62 | Electronic Multi Meter | 2 |
| 63 | Air Type Revet Gun | 2 |
| 64 | Angle Cutting Machine | 1 |

**ಸೂಚನೆ:** ತಯಾರಿಕಾ ಘಟಕ/ರೆಪ್ಯೂಟೆಡ್ ಏಜೆಂಟ್ ಮತ್ತು ರೆಪ್ಯೂಟೆಡ್ ಕಂಪನಿಗಳಿಗೆ ಆದ್ಯತೆ ನೀಡಲಾಗುವುದು.

ಟೆಂಡರ್ ಅರ್ಜಿಗಳನ್ನು ಹಾಗೂ ಪ್ರತಿಯೊಂದು ಉಪಕರಣದ ನಿರ್ದಿಷ್ಟತೆ/ವಿಶಿಷ್ಟತೆಯ ಮೂಲಕ (Specification) ದಿನಾಂಕ: 07.02.2005 ರಿಂದ 15.02.2005 ರವರೆಗೆ ಕೆಲಸದ ದಿನಗಳಂದು ಬೆಳಿಗ್ಗೆ 10.00 ಘಂಟೆಯಿಂದ ಸಂಜೆ 4.00 ಘಂಟೆಯೊಳಗೆ ಈ ಕಛೇರಿಯಲ್ಲಿ ಪಡೆಯಬಹುದು. ಪ್ರತಿ ಟೆಂಡರ್ ಅರ್ಜಿ ನಮೂನೆಯ ಬೆಲೆ ರೂ.200-00 ಗಳನ್ನು ನಗದು ಮೂಲಕ ಮಾತ್ರ ಪಾವತಿಸಬಹುದಾಗಿದೆ (ಮನಿ ಆರ್ಡರ್‌ನಲ್ಲಿ ಪಾವತಿಸಿದರೆ ತಿರಸ್ಕರಿಸಲಾಗುವುದು). ಟೆಂಡರ್ ಅರ್ಜಿಯನ್ನು ಅಂಚೆ ಮೂಲಕ ಪಡೆಯಲು ಇಚ್ಛಿಸುವವರು ರೂ.200-00 ಗಳಿಗೆ ಡಿ.ಡಿ.ಯನ್ನು ಅಡಿಷನಲ್ ಡಿ.ಜಿ.ಪಿ., ಕೆ.ಎಸ್.ಆರ್.ಪಿ., ಬೆಂಗಳೂರು ರವರ ಹೆಸರಿನಲ್ಲಿ ಪಡೆದು ಕಳುಹಿಸಲು ಕೋರಲಾಗಿದೆ. ಹಾಗೂ ಸ್ವವಿಳಾಸ ಹೊಂದಿದ ಲಕೋಟೆಯ ಮೇಲೆ ರೂ.30.00 ಗಳ ಅಂಚೆ ಚೀಟಿಯನ್ನು ಲಗತ್ತಿಸಿ ಕಳುಹಿಸಲು ಕೋರಿದೆ. ಭರ್ತಿ ಮಾಡಿದ ಟೆಂಡರ್ ಅರ್ಜಿ ನಮೂನೆಗಳನ್ನು ಹಾಗೂ ಶೇಕಡಾ 2 ರಷ್ಟು ಇ.ಎಂ.ಡಿ.ಯನ್ನು ಪ್ರತಿ ಉಪಕರಣದ ಮೌಲ್ಯಕ್ಕೆ ಮುಂಗಡ ಠೇವಣಿಯನ್ನು ಅಡಿಷನಲ್ ಡಿ.ಜಿ.ಪಿ., ಕೆ.ಎಸ್.ಆರ್.ಪಿ., ಬೆಂಗಳೂರು ರವರ ಹೆಸರಿನಲ್ಲಿ ಪಡೆದ ಡಿ.ಡಿ. ಹಾಗೂ ಮಾದರಿಯ ಬ್ರೋಚರ್ಸ್, ಕ್ಯಾಟಲಾಗ್ಸ್ ವಿತ್ ಟೆಕ್ನಿಕಲ್ ಸ್ಪೆಸಿಫಿಕೇಶನ್ ಮತ್ತು ಇತರೆ ಸಂಬಂಧಪಟ್ಟ ದಾಖಲಾತಿಗಳೊಂದಿಗೆ ಕೆ.ಎಸ್.ಆರ್.ಪಿ. ಕೇಂದ್ರಸ್ಥಾನ ಕಛೇರಿಯ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ರವರಾದ ಶ್ರೀ ಯು. ನಿಸಾರ್ ಅಹಮದ್, ಐಪಿಎಸ್, ರವರಿಗೆ ಹೆಸರಿಸಿ ದಿನಾಂಕ: 23.02.2005 ರಂದು ಸಂಜೆ 5.00 ಘಂಟೆಯೊಳಗಾಗಿ ಸಲ್ಲಿಸತಕ್ಕದ್ದು. ಈ ದಿನಾಂಕದ ನಂತರದ ಟೆಂಡರ್‌ಗಳನ್ನು ಅಂಗೀಕರಿಸಲಾಗುವುದಿಲ್ಲ. ರಹಸ್ಯ ಲಕೋಟೆಯ ಮೇಲೆ **"ಕೆ.ಎಸ್.ಆರ್.ಪಿ. ಸೆಂಟ್ರಲ್ ವರ್ಕ್‌ಶಾಪ್‌ಗೆ ಉಪಕರಣಗಳನ್ನು ಸರಬರಾಜು ಮಾಡುವ ಬಗ್ಗೆ ಟೆಂಡರ್ ಅರ್ಜಿ"** ಎಂದು ನಮೂದಿಸಬೇಕು ಹಾಗೂ ಲಕೋಟೆಯು ಸರಬರಾಜು ಮಾಡಲು ಬಯಸುವ ಸಂಸ್ಥೆಯ ವಿಳಾಸವನ್ನು ಒಳಗೊಂಡಿರಬೇಕು.

ಸ್ವೀಕರಿಸಿದ ಟೆಂಡರ್‌ಗಳನ್ನು ದಿನಾಂಕ: 25.02.2005 ರಂದು ಬೆಳಿಗ್ಗೆ 11 ಘಂಟೆಗೆ ಈ ಕಛೇರಿಯಲ್ಲಿ ತೆರೆಯಲಾಗುವುದು. ಇಚ್ಛೆಯುಳ್ಳ ಟೆಂಡರ್‌ದಾರರು ಟೆಂಡರ್‌ಗಳನ್ನು ತೆರೆಯುವ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಅವಕಾಶ ನೀಡಲಾಗುವುದು.

ಪ್ರತಿ ಉಪಕರಣಗಳಿಗೆ ಪ್ರತ್ಯೇಕವಾಗಿ ಇ.ಎಂ.ಡಿ. ಯನ್ನು ಡಿಮ್ಯಾಂಡ್ ಡ್ರಾಫ್ಟ್ ಮೂಲಕ ಪಾವತಿಸದಿದ್ದರೆ, ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ಮತ್ತು ಟೆಂಡರ್‌ದಾರರು ಅಂಚೆ ಮೂಲಕ / ಕೊರಿಯರ್ ಮೂಲಕ ಕಳುಹಿಸುವ ಟೆಂಡರ್ ಅರ್ಜಿ ಮತ್ತು ದಾಖಲಾತಿಗಳು ತಡವಾಗಿ ತಲುಪಿದಲ್ಲಿ, ನಾಶವಾದಲ್ಲಿ ಇಲಾಖೆಯು ಜವಾಬ್ದಾರಿಯಲ್ಲ. ಇಲಾಖೆಯು ಯಾವುದೇ ಕಾರಣವನ್ನು ನೀಡದೆ ಸಾರಾಸಗಟಾಗಿ / ಭಾಗಶಃ ಒಪ್ಪಿಕೊಳ್ಳುವ ಹೆಚ್ಚು ಮತ್ತು ಕಡಿಮೆ ಮಾಡುವ ಅಥವಾ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಿದೆ.

ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್‌ರವರ ಪರವಾಗಿ,
ಪಿ.ಆರ್. 65 ಕೆ.ಎಸ್.ಆರ್.ಪಿ., ಬೆಂಗಳೂರು.

**ತೋಟಗಾರಿಕೆ ಇಲಾಖೆ**

**ವಿಶೇಷ ಅಧಿಕಾರಿಗಳ ಕಛೇರಿ, ನಂದಿಗಿರಿಧಾಮ**

**ಮರು ಟೆಂಡರ್ ಆಹ್ವಾನ ಪ್ರಕಟಣೆ ಸಂಖ್ಯೆ: ತೋಇ/ವಿಅ/ನಂದಿಗಿರಿ/ವಿನಿ1/46/2004-05, ದಿನಾಂಕ: 1ನೇ ಜನವರಿ 2005**

ಕೋಲಾರ ಜಿಲ್ಲೆ, ನಂದಿ ಗಿರಿಧಾಮದಲ್ಲಿ ವಸತಿ ಗೃಹಗಳ ಸ್ವಚ್ಛತಾ ವ್ಯವಸ್ಥೆಯನ್ನು ಟೆಂಡರ್ ಷರತ್ತುಗಳನ್ವಯ ಗುತ್ತಿಗೆ ಆಧಾರದ ಮೇಲೆ ದಿನಾಂಕ: 01.01.2005 ರಿಂದ 31.01.2006 ರವರೆಗೆ ನಿರ್ವಹಿಸಲು ಗುತ್ತಿಗೆದಾರರಿಂದ ಟೆಂಡರ್ ಆಹ್ವಾನಿಸಲಾಗಿದೆ. ಟೆಂಡರ್ ಫಾರಂಗಳನ್ನು ರೂ.500.00 ಸಂದಾಯಿಸಿ ದಿನಾಂಕ: 26.02.2005 ರವರಿಗೆ ಕಛೇರಿ ವೇಳೆಯಲ್ಲಿ ಪಡೆದು ಭರ್ತಿಮಾಡಿ ಸೀಲ್ಡ್ ಲಕೋಟೆಯಲ್ಲಿಟ್ಟು ದಿನಾಂಕ: 28.2.2005 ರಂದು ಸಂಜೆ 3 ಗಂಟೆಯೊಳಗೆ ಸಲ್ಲಿಸುವುದು. ಅದೇ ದಿನ ಸಂಜೆ 4 ಗಂಟೆಗೆ ಹಾಜರಿರುವ ಟೆಂಡರುದಾರರ ಸಮ್ಮುಖದಲ್ಲಿ ಟೆಂಡರುಗಳನ್ನು ತೆರೆಯಲಾಗುವುದು. ಹೆಚ್ಚಿನ ಮಾಹಿತಿಗಾಗಿ ಈ ಕಛೇರಿಯಲ್ಲಿ ಸಂಪರ್ಕಿಸುವುದು.

ಪಿ.ಆರ್. 66 ವಿಶೇಷ ಅಧಿಕಾರಿ, ತೋಟಗಾರಿಕೆ ಇಲಾಖೆ, ನಂದಿಗಿರಿಧಾಮ.

**ಕಮಾಂಡೆಂಟ್, ಕರ್ನಾಟಕ ರಾಜ್ಯ ಮೀಸಲು ಪೊಲೀಸ್,**

**ಒಂದನೇ ಪಡೆ ರವರ ಕಛೇರಿ, ನಂ.60, ರಿಚ್‌ಮಂಡ್ ರಸ್ತೆ, ಬೆಂಗಳೂರು-560025**

**ಅಧಿಸೂಚನೆ ಸಂಖ್ಯೆ: ಸಿಬ್ಬಂದಿ (1):ನೇಮಕಾತಿ:115:2004-05, ದಿನಾಂಕ: 1ನೇ ಫೆಬ್ರವರಿ 2005**

**ವಿಷಯ:** ಕೆ.ಎಸ್.ಆರ್.ಪಿ. 1ನೇ ಪಡೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಗುರುತಿಸಿದ ಬ್ಯಾಕ್‌ಲಾಗ್ ಪೇದೆ ಹುದ್ದೆಗಳಿಗೆ ನೇಮಕಾತಿ ಮೂಲಕ ಭರ್ತಿ ಮಾಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್:13:ಎಸ್‌ಬಿಸಿ:2001, ದಿನಾಂಕ: 21.11.2001.
2) ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ ಬೆಂಗಳೂರು ರವರ ಫ್ಯಾಕ್ಸ್ ಸಂದೇಶದ ಸಂಖ್ಯೆ: ಸಿಬ್ಬಂದಿ-4:32:2004-05, ದಿನಾಂಕ: 29.01.2005.

ಈ ಕೆಳಕಂಡ ಬ್ಯಾಕ್‌ಲಾಗ್ ಹುದ್ದೆಗಳಿಗೆ ಪುರುಷ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಅರ್ಹ ಅಭ್ಯರ್ಥಿಗಳಿಂದ ಮಾತ್ರ ಅರ್ಜಿಗಳನ್ನು ನಿಗದಿತ ನಮೂನೆ (ಅನುಬಂಧ-1) ಪ್ರಕಾರ ಆಹ್ವಾನಿಸಲಾಗಿದೆ.

| ಕ್ರ. ಸಂ. | ಹುದ್ದೆಯ ಹೆಸರು ಮತ್ತು ವೇತನ ಶ್ರೇಣಿ | ಮೀಸಲಾತಿ ವರ್ಗ | ಒಟ್ಟು ರಿಕ್ತ ಸ್ಥಾನಗಳು | ವಿದ್ಯಾರ್ಹತೆ | ವಯಸ್ಸು ಅರ್ಜಿಸಲ್ಲಿಸಲು ಕೊನೆಯ ದಿನಾಂಕ ಇದ್ದಂತೆ | |
|---|---|---|---|---|---|---|
| | | | | | ಕನಿಷ್ಠ | ಗರಿಷ್ಠ |
| 1 | ಪೊಲೀಸ್ ಕಾನ್ಸ್‌ಟೇಬಲ್ ರೂ.3000-75-3450-100- 4450-125-5450 | ಎ) ಪರಿಶಿಷ್ಟ ಜಾತಿ<br>ಬಿ) ಪರಿಶಿಷ್ಟ ಪಂಗಡ | 10<br>02 | ಕನಿಷ್ಠ ನಾಲ್ಕನೇ ತರಗತಿ ಪಾಸಾಗಿರಬೇಕು. ಅಭ್ಯರ್ಥಿಗೆ ಕನ್ನಡ ಓದಲು ಮತ್ತು ಬರೆಯಲು ತಿಳಿದಿರತಕ್ಕದ್ದು. | 18 ವರ್ಷ | 25 ವರ್ಷ |

ಅರ್ಹ ಅಭ್ಯರ್ಥಿಗಳು ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ: 18.02.2005

ಅಭ್ಯರ್ಥಿಗಳು ಈ ಕೆಳಕಂಡ ಸೂಚನೆಗಳನ್ನು ಗಮನಿಸತಕ್ಕದ್ದು:-

1. **ದೇಹದಾರ್ಢ್ಯತೆ:-**

ಎ) ಎತ್ತರ:- ಕನಿಷ್ಠ 168 ಸೆಂ.ಮೀ. ಇರಬೇಕು.

ಬಿ) ಎದೆಸುತ್ತಳತೆ:- 5 ಸೆಂ.ಮೀ. ವಿಸ್ತಾರಗೊಂಡಾಗ ಕನಿಷ್ಠ 86 ಸೆಂ.ಮೀ. ಗಳಿಗೆ ಕಡಿಮೆ ಇಲ್ಲದಂತೆ ಎದೆ ಸುತ್ತಳತೆ ಹೊಂದಿರಬೇಕು.

ನೇಮಕಾತಿ ಪ್ರಾಧಿಕಾರಿಗಳು ಸಂದರ್ಶನದ ಸಮಯದಲ್ಲಿ ನಿಗದಿಪಡಿಸಿದ ದೇಹದಾರ್ಢ್ಯತೆ ಹಾಗೂ ವೈದ್ಯಕೀಯ ಅರ್ಹತೆಗಳನ್ನು ಅಭ್ಯರ್ಥಿಗಳು ಹೊಂದಿರಬೇಕು ಮತ್ತು ಮೌಖಿಕ ಸಂದರ್ಶನ ಹಾಗೂ ಕನ್ನಡ ಲಿಖಿತ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಬೇಕಾಗಿರುತ್ತದೆ.

**2. ತರಬೇತಿ ಮತ್ತು ಖಾಯಂ ಪೂರ್ವ ಅವಧಿ:-**

**ಎ) ತರಬೇತಿ:-** ನೇಮಕಗೊಂಡ ಅಭ್ಯರ್ಥಿಗಳು ಪೊಲೀಸ್ ತರಬೇತಿ ಶಾಲೆಗಳಲ್ಲಿ 12 ತಿಂಗಳು ಮೂಲ ತರಬೇತಿಯನ್ನು ಪಡೆಯಬೇಕು, ತರಬೇತಿಯಲ್ಲಿ ನಿಗದಿಪಡಿಸಿದ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕು.

**ಬಿ) ಖಾಯಂ ಪೂರ್ವ ಅವಧಿ:-** ತರಬೇತಿ ಅವಧಿಯೂ ಸೇರಿದಂತೆ 2 ವರ್ಷಗಳಾಗಿರುವುದು.

3. ಅರ್ಜಿಗಳಿಗೆ ಯಾವುದೇ ಶುಲ್ಕ ವಿಧಿಸಿರುವುದಿಲ್ಲ. ಅಭ್ಯರ್ಥಿಗಳು ಅರ್ಜಿಗಳನ್ನು ಸಲ್ಲಿಸುವಾಗ ಯಾವುದೇ ಶುಲ್ಕವನ್ನು ಪಾವತಿಸಬೇಕಾಗಿರುವುದಿಲ್ಲ. ಅರ್ಜಿ ನಮೂನೆ (ಅನುಬಂಧ-1) ಯನ್ನು ಎ4 ಸೈಜ್ ಖಾಲಿ ಹಾಳೆಯ ಮೇಲೆ ಬೆರಳಚ್ಚು ಮಾಡಿಸಿದ ಅಥವಾ ಮುದ್ರಿಸಿದ ನಮೂನೆಯಲ್ಲಿ ಸ್ಪಷ್ಟವಾಗಿ ತುಂಬಿರತಕ್ಕದ್ದು.

4. ಎ) ಒಂದು ಲಕೋಟೆ 7 X 3 (ಎನ್‌ವಿಲೋಪ್) ಯಲ್ಲಿ ನಿಮ್ಮ ಮನೆಯ ಅಂಚೆಯ ವಿಳಾಸವನ್ನು ಬರೆದು ಅದರ ಮೇಲೆ ರೂ.6.00ರ ಪೋಸ್ಟಲ್ ಸ್ಟಾಂಪ್‌ನ್ನು ಅಂಟಿಸಿ ಅರ್ಜಿಯೊಂದಿಗೆ ಲಗತ್ತಿಸುವುದು. ಅಂಚೆ ವಿಳಾಸ ತಪ್ಪು ಇದ್ದು ಅಥವಾ ಪೋಸ್ಟಲ್ ಸ್ಟಾಂಪ್ ಇಲ್ಲದೆ ಅರ್ಜಿ ಸಲ್ಲಿಸಿದಲ್ಲಿ ಸಂದರ್ಶನ ಪತ್ರ ತಲುಪದೇ ಇದ್ದಲ್ಲಿ ನೇಮಕಾತಿ ಪ್ರಾಧಿಕಾರಿಗಳು ಜವಾಬ್ದಾರರಾಗಿರುವುದಿಲ್ಲ.

ಬಿ) ಅರ್ಜಿಯಲ್ಲಿ ಫೋಟೋ ಅಂಟಿಸಲು ನಿಗದಿಪಡಿಸಿರುವ ಜಾಗದಲ್ಲಿ ನಿಮ್ಮ ಇತ್ತೀಚಿನ ಭಾವಚಿತ್ರವನ್ನು ಅಂಟಿಸಿ ಅದರ ಮೇಲೆ ಪತ್ರಾಂಕಿತ ಅಧಿಕಾರಿಗಳ ಸಹಿಯೊಂದಿಗೆ ದೃಢೀಕರಣ ಹೊಂದಿರತಕ್ಕದ್ದು.

ಸಿ) ಲಕೋಟೆ ಮೇಲೆ ಅರ್ಜಿ ಹಾಕಿರುವ ಹುದ್ದೆಯ ಹೆಸರನ್ನು ಕಡ್ಡಾಯವಾಗಿ ಬರೆಯಬೇಕು.

5. ಬ್ಯಾಕ್‌ಲಾಗ್ ಹುದ್ದೆಗಳನ್ನು ಭರ್ತಿ ಮಾಡುವ ವಿಷಯದ ಕುರಿತು ಪೂರ್ಣ ಅಧಿಕಾರವನ್ನು ಪ್ರಾಧಿಕಾರವು ಕಾಯ್ದಿರಿಸಿಕೊಂಡಿದೆ.

6. ಅಪೂರ್ಣ ಮಾಹಿತಿ ಅರ್ಜಿಗಳನ್ನು ಯಾವುದೇ ಮಾಹಿತಿ ಇಲ್ಲದೆ ತಿರಸ್ಕರಿಸಲಾಗುವುದು.

7. ಅಭ್ಯರ್ಥಿಗಳು ತಮ್ಮ ಮೀಸಲಾತಿ ಸೌಲಭ್ಯಗಳಿಗೆ ತಕ್ಕಂತೆ ಪೂರಕವಾದ ದಾಖಲೆಗಳನ್ನು ಸಂದರ್ಶನದ ಸಮಯದಲ್ಲಿ ಹಾಜರುಪಡಿಸತಕ್ಕದ್ದು.

8. ಅಭ್ಯರ್ಥಿಯು ಎಲ್ಲಾ ಪ್ರಮಾಣ ಪತ್ರಗಳು ಮತ್ತು ಅಂಕ ಪಟ್ಟಿಗಳ ಸ್ವಯಂ ದೃಢೀಕೃತ ನಕಲು ಪ್ರತಿಗಳನ್ನು ಅರ್ಜಿ ನಮೂನೆಯೊಂದಿಗೆ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕದಂದು ಮಧ್ಯಾಹ್ನ 4.30 ಗಂಟೆಯ ಒಳಗೆ ಈ ಕಛೇರಿಗೆ ತಲುಪುವಂತೆ ಕಳುಹಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಕಮಾಂಡೆಂಟ್ ಹಾಗೂ ನೇಮಕಾತಿ ಪ್ರಾಧಿಕಾರಿ,
1ನೇ ಪಡೆ, ಕೆ.ಎಸ್.ಆರ್.ಪಿ. ಬೆಂಗಳೂರು.

**ಕರ್ನಾಟಕ ರಾಜ್ಯ ಪೊಲೀಸ್**

**ಕರ್ನಾಟಕ ರಾಜ್ಯ ಕಾಯ್ದಿಟ್ಟ ಪೊಲೀಸ್ ಪೇದೆ (ಬ್ಯಾಕ್‌ಲಾಗ್) ಹುದ್ದೆಗೆ ಅರ್ಜಿ**

**ಅನುಬಂಧ-1**

ಗೆ:
ಕಮಾಂಡೆಂಟ್ ಮತ್ತು ನೇಮಕಾತಿ ಪ್ರಾಧಿಕಾರಿ,
1ನೇ ಪಡೆ. ಕೆ.ಎಸ್.ಆರ್.ಪಿ.
ನಂ.60 ರಿಚ್ಮಂಡ್ ರಸ್ತೆ,
ಬೆಂಗಳೂರು - 560 025

(ಎಲ್ಲಾ ಕಾಲಂಗಳನ್ನು ದಪ್ಪ ಅಕ್ಷರಗಳಲ್ಲಿ ನಮೂದಿಸುವುದು)

| | | |
|---|---|---|
| 1 | ಅಭ್ಯರ್ಥಿಯ ಪೂರ್ಣ ಹೆಸರು | |
| 2 | ತಂದೆಯ ಹೆಸರು | |
| 3 | ಅಭ್ಯರ್ಥಿಯ ಅಂಚೆ ವಿಳಾಸ | ಪಿನ್ ಕೋಡ್: |
| 4 | ಜನ್ಮದಿನಾಂಕ<br>(ದಿನಾಂಕ: 18.02.2005 ರಂದು ಪೂರ್ಣ ವಯಸ್ಸು) | ಅಕ್ಷರಗಳಲ್ಲಿ ............................................................ |
| 5 | ಸ್ವಂತ ಸ್ಥಳ ಮತ್ತು ಜಿಲ್ಲೆ | |
| 6 | ಧರ್ಮ / ಜಾತಿ | |
| 7 | ರಾಷ್ಟ್ರೀಯತೆ | |
| 8 | ವರ್ಗ<br>(ಸರಿಯಾದ ಚೌಕದಲ್ಲಿ ಗುರುತು ಹಾಕಿ) | SC / ST |
| 9 | ವಿದ್ಯಾರ್ಹತೆ | |

**ಘೋಷಣೆ**

ಮೇಲೆ ಹೇಳಿದ ವಿವರಗಳು ನನಗೆ ತಿಳಿದ ಮಟ್ಟಿಗೆ ಮತ್ತು ನಾನು ನಂಬುವಷ್ಟರ ಮಟ್ಟಿಗೆ ನಿಜವೆಂದು ಈ ಮೂಲಕ ಘೋಷಿಸುತ್ತೇನೆ. ಯಾವುದೇ ಮಾಹಿತಿಯು, ಪರೀಕ್ಷೆ / ನೇಮಕಾತಿಗೆ ಮುಂಚೆ ಅಥವಾ ತರುವಾಯ ಸುಳ್ಳು ಅಥವಾ ತಪ್ಪೆಂದು ಕಂಡು ಬಂದ ಸಂದರ್ಭದಲ್ಲಿ ಅಥವಾ ಅನರ್ಹತೆ ಪತ್ತೆ ಆದ ಸಂದರ್ಭದಲ್ಲಿ ನೇಮಕಾತಿ ಪ್ರಾಧಿಕಾರಿಯು ನನ್ನ ವಿರುದ್ಧ ಕ್ರಮ ಕೈಗೊಳ್ಳಬಹುದಾಗಿದೆಯೆಂದು ನನಗೆ ತಿಳಿದಿರುತ್ತದೆ.

ನಾನು ಅಧಿಸೂಚನೆಯ ನಿಯಮಗಳನ್ನು ಜಾಗರೂಕತೆಯಿಂದ ಓದಿರುತ್ತೇನೆ ಮತ್ತು ಅವುಗಳಿಗೆ ಬದ್ಧನಾಗಿರುತ್ತೇನೆ. ನಾನು ಅರ್ಜಿ ಸಲ್ಲಿಸಿದ ಹುದ್ದೆಯ ನೇಮಕಾತಿಗೆ ನಿಗದಿಪಡಿಸಿದ ವಯೋಮಿತಿ, ವಿದ್ಯಾರ್ಹತೆ ಮುಂತಾದ ಅರ್ಹತೆಯ ಎಲ್ಲಾ ಷರತ್ತುಗಳನ್ನು ಪೂರೈಸುವುದಾಗಿಯೂ ಮತ್ತು ಯಾವುದೇ ಬಗೆಯ ಪರೀಕ್ಷೆಗೆ ಹಾಜರಾಗದಂತೆ ನನ್ನನ್ನು ಪರೀಕ್ಷೆಯಿಂದ ಉಚ್ಚಾಟಿಸಲ್ಪಟ್ಟಿಲ್ಲವೆಂದು ಸಹ ಘೋಷಿಸುತ್ತೇನೆ.

ಸ್ಥಳ : ಅಭ್ಯರ್ಥಿಯ ಪೂರ್ಣ ಸಹಿ.
ದಿನಾಂಕ:

ಕಮಾಂಡೆಂಟ್ ಹಾಗೂ ನೇಮಕಾತಿ ಪ್ರಾಧಿಕಾರಿ,
1ನೇ ಪಡೆ, ಕೆ.ಎಸ್.ಆರ್.ಪಿ. ಬೆಂಗಳೂರು.

ಪಿ.ಆರ್. 62